ಪ್ರತಿಭಾ ಗ್ರಂಥಮಾಲೆ, ಧಾರವಾಡ. ವರ್ಷ ೭ : ಕಿರಣ ೪

# ದೇವರ ಸಾಮ್ರಾಜ್ಯ!

[ಸ್ವತಂತ್ರ ಸಾಮಾಜಿಕ ಕಾದಂಬರಿ]



ಬರೆದವರು :

**ಶ್ರೀ. ಕೆ. ಶ್ರೀಕಂಠ, ಪುತ್ತೂರು.**

ಮೇ ೧೯೫೦ 卐 ಬೆಲೆ : ೨—೦—೦

# ಪ್ರಕಾಶಕರ ಮಾತು



ಪ್ರತಿಭಾ ಗ್ರಂಥಮಾಲೆಯ ಏಳನೆ ವರುಷದ ನಾಲ್ಕನೆ ಕಿರಣವಾಗಿ "ದೇವರ ಸಾಮ್ರಾಜ್ಯ"ವು ಬೆಳಗುತ್ತಲಿದೆ. ಇದರ ಲೇಖಕರು ಕಾದಂಬರಿ ಕ್ಷೇತ್ರದಲ್ಲಿ ಇನ್ನೂ ಹೊಸಬರು. ಇವರು ಈ ಮೊದಲು ವಿವಿಧ ಮಾಸಪತ್ರಿಕೆಗಳ ಮೂಲಕ ತಮ್ಮ ಕೆಲವು ಕಥೆಗಳನ್ನು ಕನ್ನಡ ವಾಚಕ ವೃಂದಕ್ಕೆ ನೀಡಿದ್ದಾರೆ ಹೊಸಬರಾದರೂ ಈ ಕಾದಂಬರಿಯನ್ನು ಎಷ್ಟೊಂದು ಸ್ವಾರಸ್ಯಮಯವಾಗಿ ಹೆಣೆದುಕೊಂಡು ಬಂದಿದ್ದಾರೆಂಬುದನ್ನು ವಾಚಕರು ಸಹಜವಾಗಿ ಕಂಡುಕೊಳ್ಳಬಹುದು.

ತಮ್ಮ ಅಮೌಲ್ಯವಾದ ಈ ಕೃತಿಯನ್ನು ನಮ್ಮ ಮಾಲೆಗೆ ಪ್ರೋಣಿಸಲು ಕೊಟ್ಟದ್ದಕ್ಕಾಗಿ ಶ್ರೀಮಾನ್ ಕೆ. ಶ್ರೀಕಂಠ ಪುತ್ತೂರು ಇವರಿಗೆ ಕೃತಜ್ಞರಾಗಿದ್ದೇವೆ

೧ ಮೆ ೧೯೫೦ — ಭಾಲಚಂದ್ರ ಘಾಣೇಕರ


ಪ್ರಕಾಶಕರು :
ಭಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ
ಧಾರವಾಡ.

ಮುದ್ರಕರು :
ಎಚ್. ಬಿ. ನವಲೂರ
ಉದಯ ಮುದ್ರಣಾಲಯ
ಧಾರವಾಡ.

# ದೇವರ ಸಾಮ್ರಾಜ್ಯ

## ೧

ನಸು ಕತ್ತಲು ಹರಡಿತ್ತು. ಮಸುಕು ಮಸುಕಾಗಿ ಅಲ್ಲಿನ ಗುಡಿಸಲುಗಳು, ಗುಡಿಸಲುಗಳ ಮುಂದಿನ ಓಣಿಯಲ್ಲಿ ಆಡುವ ಅರೆ ಬತ್ತಲೆ ಬಾಲಕರು, ಬೀಡಿ ಸೇದಿಕೊಂಡು ಓಣಿಯಲ್ಲೇ ಆರಾಮವಾಗಿ ಕುಳಿತು ಹರಟೆ ಕೊಚ್ಚಿಕೊಳ್ಳುತ್ತಿದ್ದ ಜನರು ಅಸ್ಪಷ್ಟವಾಗಿ ಶಿವನಿಗೆ ಕಾಣಿಸಿದರು.

ತಾನು ಅಲ್ಲಿಗೆ ಹೋಗಬಹುದೋ ಕೂಡದೋ, ಹೋದರೆ ಅಲ್ಲಿನ ಜನರು ತನಗೆ ಹೊಡೆದಾರೋ ಎಂಬ ಭಯ ಅವನ ಮನವನ್ನಾವರಿಸಿತು. ಸಂದೇಹ ಮತ್ತು ಭಯಗಳಿಂದ ಅವನ ಕಾಲುಗಳು ನಿಂತಲ್ಲೇ ನಿಂತುಕೊಂಡವು. ನಿಂತುಕೊಂಡವೇ? ನಿಂತುಕೊಳ್ಳಲೂ ಅವನಿಂದಾಗಲಿಲ್ಲ. ಅವನು ಅಷ್ಟು ಆಯಾಸಗೊಂಡಿದ್ದನು. ಕಾಲುಗಳು ನಿರ್ಬಲವಾಗಿ ನಡುಗಿಕೊಳ್ಳುತ್ತಿದ್ದವು. ಮೈಕೈಯಲ್ಲೆಲ್ಲ ತ್ರಾಣವೇ ಇರಲಿಲ್ಲ. ಅಲ್ಲಿಯೇ ಕಣ್ಣು ಕತ್ತಲೆ ಬಂದು ಕುಸಿದು ಬೀಳುವಂತೆ ಅನಿಸಿತು ಶಿವನಿಗೆ. ಆದರೂ ಸಮೀಪದ ಮರದ ಕಾಂಡಕ್ಕೊರಗಿ ಸಾವರಿಸಿ ನಿಂತುಕೊಂಡನು.

ಸಹಿಸಲಸಾಧ್ಯವಾದ ಹಸಿವಿನಿಂದ ಅವನು ಕಂಗಾಲಾಗಿದ್ದನು. ಹೊಟ್ಟೆಯಲ್ಲಿ ಹಸಿವಿನ ತಾಂಡವ ನೃತ್ಯ ನಡೆದಿತ್ತು. ಕಣ್ಣುಗಳಲ್ಲಿ ಜೀವ ಕಳೆಯೇ ಇರಲಿಲ್ಲ. ಇದೀಗ ತಾನು ಕುಸಿದು ಕೆಸರಲ್ಲಿ ಬಿದ್ದು ಬಿಡುವೆನು ಎಂದವನಿಗೆ ಅನಿಸುತ್ತಿತ್ತು

ಆದರೂ ಧೈರ್ಯದಿಂದ, ಚಳಿಯ ರಾತ್ರಿಯನ್ನು ಯಾವದಾದರೂ ಬೆಚ್ಚಗಿನ ತಾಣದಲ್ಲಿ ಕಳೆಯಬೇಕೆಂಬ ಆಶೆಯಿಂದ ಜಾರ್ಜ ಟವುನಿನಿಂದ ಸಾಂಥೋಮಿನ ತನಕ ಶಿವನ್ ನಡೆದು ಬಂದಿದ್ದನು. ಇನ್ನು ಮುಂದೆ ಹೆಜ್ಜೆ ಇಡಲು ಅವನ ಕಾಲುಗಳಲ್ಲಿ ಶಕ್ತಿಯೇ ಇರಲಿಲ್ಲ. ನಸುಕತ್ತಲಲ್ಲಿ ಆ ಗುಡಿಸಲ ಸಾಲುಗಳನ್ನು ಕಂಡಾಗ, ರಾತ್ರಿಯ ಚಳಿಯನ್ನು ಅಲ್ಲಿ ಎಲ್ಲಾದರೂ ಇದುರಿಸಬಹುದೆಂದು ಶಿವನು ಎಣಿಕೆ ಹಾಕಿದ್ದನು. ಆದರೆ

ಆ ಓಣಿ, ಓಣಿಯಲ್ಲಾಡುವ ಬಾಲಕರು, ಕುಳಿತುಕೊಂಡು ಹರಟೆಯಲ್ಲಿ ಮಗ್ನರಾದ ಪ್ರಾಯಸ್ಥರನ್ನು ಕಂಡು ಅವನ ಬಾಲ ಹೃದಯ ಬೆದರಿತ್ತು. ಅಪರಿಚಿತನಾದ ತನ್ನನ್ನು ಕಂಡು ಅವರೆಲ್ಲರೆಮ್ಮ ಒಂದು ತೊಂದರೆ ಕೊಟ್ಟರೆ? ಮರದ ಕಾಂಡಕ್ಕೊರಗಿದವನು ಇನ್ನೊಮ್ಮೆ ತನ್ನ ಮುಂದಿನ ದೃಶ್ಯವನ್ನು ನೋಡಿದನು. ತನ್ನ ಎದುರಲ್ಲೇ, ತೀರ ಸಮೀಪವಾಗಿ ಎರಡು ಗುಡಿಸಲುಗಳು ಒತ್ತೊತ್ತಾಗಿ ಇದ್ದುವು. ಆ ಗುಡಿಸಲುಗಳ ಮಧ್ಯೆ ತಾನು ಸೇರಿಕೊಂಡರೆ ರಾತ್ರಿಯನ್ನು ನಿಶ್ಚಿಂತವಾಗಿ ಕಳೆಯಬಹುದು ಎಂದವನಿಗೆ ತೋಚಿತು.

ಹಾಗೇ ಶಿವನು ಮುಂದೆ ಸರಿದನು. ತಡವರಿಸುತ್ತಾ ಗುಡಿಸಲು ಗಳ ನಡುವಿನ ಇಕ್ಕಟ್ಟಾದ ಎಡೆಯಲ್ಲಿ ತೂರಿಕೊಂಡನು. ಮಲಮೂತ್ರ ಗಳ ವಾಸನೆ ಮೂಗಿಗ ಹೊಡೆಯುತ್ತಿತ್ತು! ಆದರೆ ಅದರೆಡೆಗೆ ಶಿವನು ಗಮನ ಕೊಡುವಂತಿರಲಿಲ್ಲ. ರಾತ್ರಿಯನ್ನು ಕಳೆಯಲು ಬೆಚ್ಚಗಿನ ತಾಣ ಸಿಕ್ಕಿತು. ದೇವರು ಅಷ್ಟು ಕೃಪೆ ತೋರಿದ! ಕಣ್ಣು ಮುಚ್ಚಿ ರಾತ್ರಿ ಯನ್ನು ನಿಶ್ಚಿಂತೆಯಿಂದ ಕಳೆದರಾಯಿತು. ಮುಂಜಾವಿನಲ್ಲಿ ಎದ್ದು ರಸ್ತೆ ಸೇರಿದರೆ ದಾರಿಹೋಕರನ್ನು ಬೇಡಿ ಕಾಡಿ ನಾಲ್ಕು ಕಾಸು ಕೂಡಿಸ ಬಹುದು. ರಸ್ತೆಯ ಪಕ್ಕದಲ್ಲಿ ಮಾರಾಟ ಮಾಡುವ ಹೆಂಗಸಿನಿಂದ ಇಡ್ಲಿ ಗಳನ್ನು ಕೊಂಡು, ಹೊಟ್ಟೆಯನ್ನು ತಣಿಸಬಹುದು!

ಶಿವನ್ ಅಲ್ಲಿಯೇ ನೆಲದ ಮೇಲೆ ಗೋಡೆಗೊತ್ತಿ ಬಿದ್ದುಕೊಂಡನು. ಕೈಕಾಲುಗಳನ್ನು ಮಡಚಿ, ಮುದುಡಿ, ಮಲಗುತ್ತಾ ನಿದ್ದೆಗೆ ಆಹ್ವಾನ ವಿತ್ತನು. ಆದರೆ ನಿದ್ದೆ ಅವನನ್ನು ಒಲಿಯಲಿಲ್ಲ. ಹಸಿವಿನ ಅಗ್ನಿ ಅವ ನನ್ನು ದಹಿಸುತ್ತಿದ್ದ ಕಾರಣ ನಿದ್ದೆ ಸನಿಹಕ್ಕೆ ಬರುವಂತಿರಲಿಲ್ಲ. ಶಿವನ್ ನರಳುತ್ತ ಇನ್ನೂ ಮುದುಡಿದನು.

ಕತ್ತಲು ಇನ್ನೂ ಚೆನ್ನಾಗಿ ಕವಿದಿರಲಿಲ್ಲ. ಸುತ್ತುಮುತ್ತು ಏನಿದೆ ಎಂದು ತಿಳುಹಿಸುವ ಬೆಳಕು ಇನ್ನೂ ಸಂಪೂರ್ಣ ಮಾಸಿ ಹೋಗಿರಲಿಲ್ಲ. ಅಲ್ಲೇನಿತ್ತು? ಬರಿಯ ಮಣ್ಣು ಮಾತ್ರ! ಮತ್ತು ಓಕರಿಕೆ ಬರಿ ಸುವ ಹೊಲಸು ವಾಸನೆ! ಕ್ಷಣಕ್ಷಣದಲ್ಲಿ ತೀಕ್ಷ್ಣತೆಗೇರುವ ಚಳಿ! ಈ ವಿಚಿತ್ರ ಸ್ಥಳದಲ್ಲಿ ಶಿವನ್ ನಿದ್ರೆಯಿಂದ ಮೈಮರೆಯಲು ಯತ್ನಿಸಿದನು

ಇಷ್ಟರಲ್ಲಿ ಶಿವನ ಮೈಮೇಲೆ ಏನೋ ಘನವಸ್ತುವು ಬಿದ್ದಂತಾ ಯಿತು. ಬಿದ್ದು ದೂರಕ್ಕೆ ಹಾರಿ ಹೋದಂತಾಯಿತು. ಶಿವನ್ ಭಯ

ದಿಂದ ನಡುಗಿ ಹೋದನು! ಅವನ ಮೈಯೆಲ್ಲ ಬೆವತಿತು. ತಟಕ್ಕನೆ ಎದ್ದು ಕುಳಿತನು. ಮೈಮೇಲೆ ಬಿದ್ದು ಹಾರಿ ಹೋದ ಘನ ಪದಾರ್ಥ ಯಾವುದು ಎಂದು ಅವನಿಗೆ ತಿಳಿಯುವಂತಿರಲಿಲ್ಲ. ಆದಕಾರಣ ಅವನ ಮನಸ್ಸು ವಿಲಕ್ಷಣ ಭಯದಿಂದ ಕುಗ್ಗಿ ಹೋಯಿತು. ಆಗಲೇ ಸಮೀಪ ದಿಂದ ನಾಲ್ಕೈದು ಬಾಲಕರ ಮಾತುಕತೆಯ ಸದ್ದು ಕೇಳಿಸಿತವನಿಗೆ. ಬಾಲಕರು ತಾನು ಕುಳಿತೆಡೆಗೇ ಬರುತ್ತಾರೆ ಎಂದವನಿಗೆ ತಿಳಿಯಿತು. ತಾನು ಎಲ್ಲಿಯಾದರೂ ಅವರ ಕಣ್ಣಿಗೆ ಬೀಳುತ್ತೇನೆಯೋ ಎಂದು ಭಯ ವಾಯಿತು ಅವನಿಗೆ.

ದೀಪದ ಬೆಳಕು ಆ ಗೋಡೆಗಳ ನಡುವಿನ ಸಂದನ್ನು ಬೆಳಗಿಸಿತು. ಶಿವನ ಮೇಲೆ ಬೆಳಕು ಚೆಲ್ಲಿತು. ಅವನು ಹೆದರಿಕೆಯಿಂದ ತಲೆ ಬಗ್ಗಿ ನೋಡಿದನು. ಎದುರಿನಲ್ಲಿ ಅವನಿಗೊಂದು ಲಾಟೀನು ಕಾಣಿಸಿತು. ಅದನ್ನು ಹಿಡಕೊಂಡ ಬಾಲಕನ ಹಿಂದೆ ಮೂವರು ಬಾಲಕರು ಕಾಣಿಸಿ ಕೊಂಡರು.

ದೀಪವನ್ನು ಹಿಡಕೊಂಡ ಬಾಲಕ ಹೇಳುತ್ತಿದ್ದನು

"ಹೌದು ಇಲ್ಲಿಯೇ ಚೆಂಡು ಬಿದ್ದಿದೆ.. "

"ನೋಡು ಕಣ್ಣಾ! ಆ ಸಂದಿನೊಳಗೆ ಹಾರಿ ಹೋಗಿರಬಹುದು. ಒಳಗೆ ನುಗ್ಗಿ ನೋಡು" ಹಿಂದಿನಿಂದ ಹಿರಿಯ ಹುಡುಗನೊಬ್ಬ ಹೇಳಿದನು

"ರಾತ್ರಿಯಾಯಿತು, ಆಟ ಸಾಕು ಮಾಡೋಣ ಎಂದು ನಾನಂದೆ. ಆದರೆ ನನ್ನ ಮಾತು ಕೇಳದೆ, ಈಗ ಚೆಂಡು ಕಳೆದು............" ದೀಪ ಹಿಡಿದ ಬಾಲಕ ಗುಣಗುಟ್ಟುತ್ತಾ ಸಂದಿನ ಒಳಗೆ ಸೇರಿದನು. ಒಳಗೆ ಸೇರಿದವನೇ ತನ್ನ ಗುಣಗಾಟವನ್ನು ತಕ್ಷಣ ನಿಲ್ಲಿಸಿದನು. ಅಲ್ಲಿಯೇ ಅಲುಗಾಡದೆ ನಿಂತುಕೊಂಡನು.

"ಏನಾಯಿತೋ? ಯಾಕೆ ಹಾಗೆ ನಿಂತಿದ್ದೀ?" ಹಿಂದಿನಿಂದ ಮೂವರೂ ಉದ್ವೇಗದಿಂದ ಪ್ರಶ್ನಿಸಿದರು.

"ನೋಡಿ! ಇಲ್ಲಿ ಯಾವನೋ ಕುಳಿತಿದ್ದಾನೆ.........." ದೀಪ ಹಿಡಿದ ಬಾಲಕ ತಲೆ ತಿರುಗಿಸದೆ ಹೇಳಿದ.

ಹಿಂದುಳಿದ ಮೂವರೂ ಮುಂದಕ್ಕೆ ಧಾವಿಸಿ ಬಂದರು. ಭಯ ದಿಂದ ಮುದುಡಿದ ಶಿವನನ್ನು ಕಂಡರು.

"ನಮ್ಮ ಚೆಂಡನ್ನು ಕಂಡಿದ್ದೀಯೋ? ಈ ಕಡೆಗೆ ಬಿತ್ತಲ್ಲಾ?" ಹಿರಿಯ ಹುಡುಗ ಕೇಳಿದನು.

ಶಿವನ್ ಉತ್ತರಿಸುವ ಗೊಡವೆಗೆ ಹೋಗಲಿಲ್ಲ. ಮೌನವಾಗಿ ಪ್ರಶ್ನೆ ಕೇಳಿದವನನ್ನೇ ನೋಡಿದನು.

"ನಮ್ಮ ಚೆಂಡನ್ನು ಕಂಡಿದ್ದೀಯೋ?" ಮೂವರೂ ಪ್ರಶ್ನೆ ಹಾಕಿದರು. ಇದಕ್ಕೂ ಶಿವನ್ ತುಟಿಯೆತ್ತಲಿಲ್ಲ. ಉತ್ತರ ಕೊಡುವ ಧೈರ್ಯವೇ ಅವನಲ್ಲಿರಲಿಲ್ಲ. ತಾನು ಹೊಸಬನೆಂದು, ರಾತ್ರಿಯನ್ನು ಕಳೆಯಲು ಬಂದವನೆಂದು ಹೇಳಿದರೆ– ಅವರು ಹೊಡೆಯತೊಡಗಿದರೆ? ತನ್ನನ್ನು ಅಲ್ಲಿಂದ ಒದ್ದು ಹೊಡೆದೋಡಿಸಿದರೆ?

"ಓಹೋ! ಬಹುಶಃ ಈ ಹುಡುಗ ನಮ್ಮ ಚೆಂಡನ್ನು ಕದ್ದಿರಬಹುದು!" ದೀಪವನ್ನು ಹಿಡಕೊಂಡ ಹುಡುಗ ಹೇಳಿದನು.

"ಹೌದೇನೋ! ನಮ್ಮ ಚೆಂಡನ್ನು ತೆಗೆದಿದ್ದೀಯೋ?" ಹಿರಿಯ ಬಾಲಕ ಗುಡುಗಿದನು.

ಶಿವನ್ ಭಯದಿಂದ ಕಂಗಾಲಾದನು. ಅವನ ಬಾಯಲ್ಲಿ ಮಾತೇ ಬರಲಿಲ್ಲ.

"ಮಾತಾಡದೆ ಮೂಕನಂತೆ ಕುಳಿತಿದ್ದೀಯಲ್ಲಾ? ಚೆಂಡು ಏನಾಯಿತು ಹೇಳೋ?"

ಶಿವನ್ ಭಯವಿಹ್ವಲನಾಗಿ ಉಸುರಿದ:

"ನನಗೆ ಗೊತ್ತಿಲ್ಲ!...."

"ಗೊತ್ತಿಲ್ಲವಂತೆ! ಹಿಡಿದು ಹೊರಗೆಳೆದು ಎರಡೇಟು ಬಿಗಿದರೆ ಚೆಂಡು ತನಗೆ ತಾನೇ ಬಂದೀತು!" ದೀಪವನ್ನು ಹಿಡಿದ ಬಾಲಕ ಸೂಚಿಸಿದನು!

ಸೂಚನೆ ಕಾರ್ಯರೂಪಕ್ಕೇ ಇಳಿಯಿತು! ಶಿವನ ಕೈ ಹಿಡಿದು ಬಲಾತ್ಕಾರವಾಗಿ ಸಂದಿನಿಂದ ಹೊರಗೆಳೆದು; ಓಣಿಗೆ ತಂದು, ಬೆನ್ನ ಮೇಲೆ ಎರಡು ಗುದ್ದು ಹಾಕಿದ ಹಿರಿಯ ಹುಡುಗ!

"ಅಯ್ಯೋ! ಅಯ್ಯೋ!! ಕೊಲ್ಲುತ್ತಾರೆ...." ಚೀರಾಡಿದನು ಶಿವನ್.

"ಚೆಂಡು ಎಲ್ಲಿ ಅಡಗಿಸಿಟ್ಟಿದ್ದೀ? ಹೇಳು! ಚೆಂಡೆಲ್ಲಿ?" ನಾಲ್ವರು ಬಾಲಕರು ಕಿರುಚಿದರು.

"ಅಯ್ಯೋ!...."

ಶಾಂತವಾಗಿದ್ದ ಗುಡಿಸಲ ಸಮೂಹದ ಆ ಕೊಂಪೆಯ ಶಾಂತಿ ಕದಡಿ ಹೋಯಿತು ಬೊಬ್ಬೆ ಚೀರಾಟ ಕೇಳಿ ಗಂಡುಸರು, ಹೆಂಗುಸರು ಓಡೋಡಿ ಒಂದು ಗುಂಪು ಕೂಡಿದರು. ಶಿವನನ್ನು ಹೊಡೆಯುತ್ತಿರುವ ಬಾಲಕರನ್ನು ಹಿಡಿದೆಳೆದರು.

"ಏನು? ಯಾಕೀ ಗಲಾಟೆ?" ಮುದುಕನೊಬ್ಬನು ಬಾಲಕರನ್ನು ಕೇಳಿದನು.

"ನಮ್ಮ ಚೆಂಡನ್ನು ಇವನು ಕದ್ದುಕೊಂಡಿದ್ದಾನೆ!" ಬಾಲಕರು ಅಂದರು.

"ಹೌದೇನು?...." ಮುದುಕ ನೆಲದ ಮೇಲೆ ಬಿದ್ದುಕೊಂಡಿದ್ದ ಶಿವನ ಬಳಿ ಕೇಳಿದನು.

ಆದರೆ ಉತ್ತರ ಕೊಡಲು ಶಿವನಿಗೆ ಸ್ಮೃತಿಯಿತ್ತೇ? ಅವನ ಕಣ್ಣ ಸುತ್ತ ಆಗಲೇ ಕತ್ತಲೆ ಕವಿದಿತ್ತು. ಕಿವಿಗಳಲ್ಲಿ ಅಗಾಧ ಮೌನ ಆಗಲೇ ತುಂಬಿಕೊಂಡಿತ್ತು!

"ಹಾಂ! ಹುಡುಗನಿಗೆ ಸ್ಮೃತಿ ತಪ್ಪಿದೆ! ಎತ್ತಿ ಮನೆಯೊಳಗೊಯ್ಯಿರಿ!" ಮುದುಕ ಗಾಬರಿಯಿಂದ ಉದ್ಗರಿಸಿದ.

ಸ್ಮೃತಿ ತಪ್ಪಿತು ಎಂದೊಡನೆ, ಸುತ್ತಲಿನ ಜನರು ನೋಡಲೆಂದು ಮುಗ್ಗರಿಸಿದರು ಮುಂದೊತ್ತಿ ಬಂದವರನ್ನು ಬಯ್ಯುತ್ತಾ ಮುದುಕ ಹಿಂದೂಡಿದನು. 'ಹುಡುಗ ಯಾರು? ನನ್ನ ಮಗನೇ?' ಎಂಬಿತ್ಯಾದಿ ಕಾತರದ ಪ್ರಶ್ನೆಗಳ ಮಳೆ ಮುದುಕನ ಕಿವಿಗಳಿಗೆ ಬಿದ್ದವು. ಆ ಉದ್ರೇಕಿತ ವಾತಾವರಣವನ್ನು ಕಂಡು ಮುದುಕ ತನ್ನಿದಿರು ಇದ್ದ ಇಬ್ಬರು ಯುವ್ವನಸ್ಥರನ್ನು ಕಂಡು ಕೂಗಿದ:

"ನೋಡುತ್ತೀರೇನು ಪೆದ್ದಣ್ಣಗಳಂತೆ! ಹುಡುಗನನ್ನು ಎತ್ತಿ ಮನೆಯೊಳಗೆ ಒಯ್ಯಿರಿ ಅಂತ ಹೇಳಿದ್ದಲ್ಲವೋ?"

ಅವರು ಶಿವನ ತಲೆ ಕಾಲುಗಳನ್ನು ಹಿಡಿದು, ಮುದುಕನ ಗುಡಿಸಲಿಗೆ ಕೊಂಡೊಯ್ದರು.

ಕೆದರಿದ ಕೂದಲಿನ, ಹರಕು ಚಿಂದಿಯಿಂದ ತನ್ನ ಕ್ಷೀಣ ದೇಹವನ್ನು ಮುಚ್ಚಿಕೊಂಡ ಹೆಂಗುಸೊಬ್ಬಳು, ತನ್ನ ಕಟ್ಟಿಗೆಯಂತಹ ಕೈಯಿಂದ ಮುದುಕನ ಬೆನ್ನನ್ನು ಮುಟ್ಟಿ ಉದ್ವೇಗದಿಂದ ಕೇಳಿದಳು:

"ಹುಡುಗ ಯಾರು ನನ್ನ ಮರಿಯೋ?" ಕಾತರತೆಯಿಂದ ಅವಳ ಧ್ವನಿ ಕಂಪಿಸುತ್ತಿತ್ತು.

"ಅಗೆ! ನಿನ್ನ ಮರಿ ಈಗ ಇಲ್ಲೇಕೆ ಬರುತ್ತಾನೆ? ಅವನು ಬೇಚಿನಲ್ಲಿ ಬೇಡಿಕೊಂಡಿರಬಹುದು!" ಮುದುಕ ಹೇಳಿ ಒಳ ನಡೆದನು.

"ಆದರೂ..." ಹೆಂಗುಸಿನ ಮಾತು ನಡುಗಿ ನಿಂತಿತು. ಉತ್ಕಂಠತೆಯಿಂದ ಅವಳು ಗುಡಿಸಲ ಬಾಗಿಲೆಡೆಗೆ ಮುನ್ನುಗ್ಗಿದಳು. ಅವಳ ಮಗ ತಂಟಲು ಮಾರಿ. ಬೇಡಿ ಕಾಡಿ ನಾಲ್ಕು ಕಾಸು ತಾ ಎಂದು ಸಮುದ್ರ ತೀರಕ್ಕೆ ಕಳುಹಿದ್ದಳು. ಆದರೆ ಅವನು ಬೇಚಿಗೆ ಹೋಗಿದ್ದಾನೋ ಇಲ್ಲವೋ?.... ಇಲ್ಲಿಯೇ ಮಕ್ಕಳೊಡನೆ ಆಡಿ ಪೆಟ್ಟು ತಿಂದು ಸ್ಮೃತಿ ತಪ್ಪಿರಬಹುದಲ್ಲ? .' ಸಂಶಯದಿಂದ ಹೆಂಗುಸು ಮುನ್ನುಗ್ಗಿದಳು. ಆದರೆ ಅವಳಂತೆಯೇ ಕೊಂಪೆಯ ಹೆಂಗುಸರೆಲ್ಲ ಮುತ್ತಿಗೆ ಹಾಕಿದ್ದರು. ಎಲ್ಲರಿಗೂ ಹುಡುಗ ತನ್ನ ಮಗನೆ ಎಂಬ ಕಳವಳ! ಮುದುಕನ ಗುಡಿಸಲಿಗೆ ಮುತ್ತಿಗೆ ಹಾಕಿದವರು ಅರೆಬತ್ತಲೆ ತಾಯಂದಿರು ಮಾತ್ರವೇ ಅಲ್ಲ, ಸೊಂಟದ ಸುತ್ತ ತುಂಡು ವಸ್ತ್ರವನ್ನು ಸುತ್ತಿದ, ನಿರ್ಬಲರಾದ, ಮೂಳೆಯೆಲ್ಲ ಹೊಡೆದು ಕಾಣಿಸುವ ಕೊಂಪೆಯ ಗಂಡುಸರೆಲ್ಲರೂ ಇದ್ದರು! ಮಗನನ್ನು ಬೇಡಲಿಕ್ಕೆಂದು ಹೊರಗೆ ಕಳುಹಿದ್ದೆ. ಆದರೆ ಪೆಟ್ಟುಗಿಟ್ಟು ತಿಂದು, ಎಲ್ಲಿಯಾದರೂ...... ತಾಯಂದಿರ ಕಳವಳವೇ ಈ ತಂದೆಯರಿಗೂ ಕೂಡ! ಅಂತೆಯೇ ಕೊಂಪೆಯ ಸಮಸ್ತ ಗಂಡು ಹೆಣ್ಣುಗಳೆಲ್ಲ ಅಲ್ಲಿ ಕಲೆತರು. ಆ ಅವಿದ್ಯಾವಂತ ಜನರಿಗೆ ಉದ್ವೇಗ, ಕಾತರತೆಗಳನ್ನು ತಡೆಯುವ ಶಕ್ತಿಯೆಲ್ಲಿದೆ?.... ಹೆಂಗುಸರ ಕೂಗಾಟವೂ, ಗಂಡುಸರ ಹೊಡೆದಾಟವೂ ಆರಂಭವಾಯಿತು! ಗಲಭೆ ವಿಪರೀತವಾಯಿತು.

ಮುದುಕ ಗುಡಿಸಲ ಬಾಗಿಲಲ್ಲಿ ಕಾಣಿಸಿಕೊಂಡನು. ಜನ ಕಾತರದಿಂದ ಒಂದು ಹೆಜ್ಜೆ ಮುಂದರಿದರು. "ಮುನಿಸ್ವಾಮಿ! ಹುಡುಗ ಯಾರು?" ಎಂಬ ಕೂಗಾಟವೆದ್ದಿತು.

"ಹುಡುಗ ನಮ್ಮ ಈ ಕೊಂಪೆಯವನಲ್ಲ. ಎಲ್ಲಿಯೋ ಹೊರಗಿನವನು. ಇನ್ನೂ ಜ್ಞಾನ ಬಂದಿಲ್ಲ.... ಸ್ವಲ್ಪ ಗಾಳಿ ಬೀಸಲಿ. ಎಲ್ಲರೂ ಹೊರಟು ಹೋಗಿರಿ!" ಮುನಿಸ್ವಾಮಿ ಕೂಗಿ ಹೇಳಿದ.

ಕೊಂಪೆಯ ಪ್ರತಿಯೊಬ್ಬ ಬಾಲಕನ ಪರಿಚಯವೂ ಮುನಿಸ್ವಾಮಿಗೆ ಇದೆಯೆಂಬುದು ಸರ್ವವಿದಿತ. ಆದರಿಂದ ಅವಸರದ ಕೆಲಸವಿರುವ

ಜನರೆಲ್ಲ ಹೊರಟು ಹೋದರು. ಆದರೆ, ಹುಡುಗನ ಬಗ್ಗೆ ಇನ್ನೂ ತಿಳಿಯಬೇಕೆಂದು ಕುತೂಹಲವಿದ್ದವರು ಅಲ್ಲೇ ಓಣಿಯಲ್ಲಿ ನಿಂತುಕೊಂಡರು. ನಿಂತು ಆಯಾಸಗೊಳ್ಳಲು ಮುನಿಸ್ವಾಮಿಯ ಗುಡಿಸಲನ್ನು ಪ್ರವೇಶಿಸಿ ಹುಡುಗನನ್ನು ನೋಡಲು ಯತ್ನಿಸಿದರು. ಆದರೆ ಮುನಿಸ್ವಾಮಿ ಯಾರನ್ನೂ ಒಳಬಿಡಲಿಲ್ಲ. ಅವನನ್ನು ಬಯ್ಯುತ್ತಾ ಉಳಿದವನಲ್ಲಿ ಹೆಚ್ಚಿನವರು ಹೊರಟು ಹೋದರು........

...... ಎಷ್ಟು ಹೊತ್ತು ಆ ಸ್ಥಿತಿಯಲ್ಲಿದ್ದನೋ ಶಿವನಿಗೆ ತಿಳಿಯದು. ಎಚ್ಚರವಾದಾಗ ಅವನಿಗೆ ತಾನೊಂದು ಗುಡಿಸಲೊಳಗೆ ಇದ್ದೇನೆಂದು ತಿಳಿಯಿತು. ಅರೆ ತೆರೆದ ಕಣ್ಣುಗಳಿಗೆ ಮೊದಲು ಕಂಡುದು ಮಿಣಮಿಣನೆ ಉರಿಯುವ ದೀಪ. ದೀಪದ ಬಳಿ ಇಬ್ಬರು ವ್ಯಕ್ತಿಗಳು; ಕೃಷ ದೇಹದ ಮುದುಕ ಮತ್ತು ಒಡಕಲಾದ ಮುದುಕಿ. ಮುದುಕನ ತಲೆಗೂದಲು ನೆರೆತಿತ್ತು. ಮುಖದ ಚರ್ಮ ನೆರಿ ಕಟ್ಟಿತ್ತು. ಕಣ್ಣುಗಳು ಗುಳಿಗೆ ಬಿದ್ದು ಕಾಂತಿಹೀನವಾಗಿದ್ದವು. ಚೂಪಾದ ಉದ್ದವಾದ ಮೂಗಿನ ಕೆಳಗೆ ಬಿರುಸಾದ ಬಿಳೀ ಮೀಸೆ ಶೋಭಿಸುತ್ತಿತ್ತು. ಆ ಮುಖವನ್ನು ತಾನೆಲ್ಲಿಯೋ ಮೊದಲು ನೋಡಿದ್ದೇನೆಂದು ಅವನಿಗನಿಸಿತು. ಆದರೆ ಜ್ಞಾಪಕಕ್ಕೆ ಬರಲು ತುಸು ಹೊತ್ತು ಹಿಡಿಯಿತು.

ಶಿವನ್ ಕಣ್ಣು ತೆರೆದು ಮುದುಕ ಮುದುಕಿಯರನ್ನು ಪಿಳಪಿಳನೆ ನೋಡಿದನು. ಎದ್ದು ಕುಳಿತುಕೊಳ್ಳಲು ಯತ್ನಿಸಿದನು. ಆದರೆ ಏಳಲು ಅವನಿಂದಾಗಲಿಲ್ಲ. ಕೈಕಾಲುಗಳಲ್ಲಿ ಶಕ್ತಿಯೇ ಇರಲಿಲ್ಲ. ಹೊಟ್ಟೆಯಲ್ಲಿ ಹಸಿವಿನ ಕಿಚ್ಚು ಉರಿಯುತ್ತಿತ್ತು. ಏಳಲಾರದೆ ಶಿವನ್ ಮಲಗಿದಲ್ಲೇ ಅತ್ತಿತ್ತ ತಲೆ ತಿರುಗಿಸಿದನು.

“ ಹಾಂ! ಹುಡುಗನಿಗೆ ಎಚ್ಚರವಾಯಿತು!.... ” ಮುದುಕನ ಬಾಯಿಯಿಂದ ಸಂತಸದ ಉದ್ಗಾರ ಹೊರಟಿತು.

ಮುದುಕಿ ಕೂಡಲೇ ಎದ್ದು ಹೋಗಿ, ಹೊರಗಿನ ಜನರಿಗೆ ಸುದ್ದಿ ತಲುಪಿಸಿದಳು. ಜನರ ಗಲಿಬಿಲಿಯ ಸದ್ದೂ ಶಿವನಿಗೆ ಕೇಳಿಸಿತು. ಆದರೆ ಆ ಗುಲ್ಲು ಎಲ್ಲಿಯೋ ದೂರದಿಂದ ಯಾರೋ ಗುಣಗುಟ್ಟುವಂತೆ ಅವನಿಗನಿಸಿತಷ್ಟೆ. ಸಹನಾತೀತವಾದ ಹಸಿವಿನಿಂದ ಅವನುಸುರಿದ:

“ ಹಸಿವು....ಹಸಿವು....ನೀರು....ನೀರು....”

ಮುದುಕನ ಆಜ್ಞೆ ಕೂಡಲೇ ಮುದುಕಿಗೆ ಹೋಯಿತು ಮುದುಕಿ ನೀರು ತಂದು ಕೊಟ್ಟಳು. ಅದರ ಹಿಂದಿನಿಂದಲೇ ಬಟ್ಟಲಲ್ಲಿ ಬಿಸಿ ಗಂಜಿಯನ್ನೂ ತಂದು ಕೊಟ್ಟಳು.

ಮುನಿಸ್ವಾಮಿ ಮುಂದೆ ಸರಿದು ಶಿವನನ್ನು ಹಿಡಿದೆತ್ತಿ ಕುಳ್ಳಿರಿಸಿ. ತನ್ನೆದೆಯ ಮೇಲೆ ಆನಿಸಿಕೊಂಡನು. ಮುದುಕಿ ನೀರಿನ ಲೋಟವನ್ನು ಅವನ ತುಟಿಗಳೆಡೆಯಲ್ಲಿ ಹಿಡಿದಳು. ಶಿವನ್ ನೀರನ್ನು ಹೀರಿದನು. ಉಸ್ಸೆಂದು ನಿಟ್ಟುಸಿರು ಬಿಟ್ಟನು. ಮುದುಕ ಗಂಜಿಯ ಬಟ್ಟಲನ್ನು ಅವನ ಬಾಯಿಗೆ ಹಿಡಿದನು. ಬಿಸಿಬಿಸಿಯಾದ ಗಂಜಿ ನೀರು, ಬೆಂದ ಅನ್ನದ ಕಾಳುಗಳು ಶಿವನ ಹೊಟ್ಟೆಯನ್ನು ಸೇರಿದವು. ಅವನಿಗೆ ಅಷ್ಟೊಂದು ಸುಖವೆನಿಸಿತು! ಕೃತಜ್ಞತೆಯಿಂದ ಮುದುಕನ ಮುಖವನ್ನು ನೋಡಿದನು

" ಈಗ ಸುಖವಾಯಿತೇ ? " ಮುದುಕ ಅವನ ತಲೆಯ ಮೇಲೆ ಕೈಯಾಡಿಸುತ್ತ ಕೇಳಿದ್ದನು.

" ಹೂಂ " ಎಂದು ತಲೆಯಲ್ಲಾಡಿಸಿ, ನೇರವಾಗಿ ಕುಳಿತ ಶಿವನ್.

" ನಿನ್ನ ಹೆಸರೇನು ? " ಮುದುಕ ಕೇಳಿದ.

" ಶಿವನ್...."

" ನೀನು ಇಲ್ಲಿಯವನಲ್ಲಾ ? "

" ಅಲ್ಲ ! "

" ಮತ್ತೆ ನಿನ್ನ ಮನೆಯೆಲ್ಲಿ ? "

" ಈಗ ಎಲ್ಲಿಯೂ ಇಲ್ಲ ! "

" ಅಂದರೆ ? " ಕುತೂಹಲದಿಂದ ಮುನಿಸ್ವಾಮಿ ಕೇಳಿದನು.

" ಎರಡು ತಿಂಗಳ ಹಿಂದೆ ಬಿರುಗಾಳಿ ಮಳೆಗೆ ಮನೆ ಬಿದ್ದು ಹೋಯಿತು. "

" ತಂದೆ ತಾಯಿ ? "

" ಮನೆ ಬೀಳುವಾಗ ತಾಯಿ ತೀರಿ ಹೋದಳು. ಅನಂತರ ತಂದೆ ಬಸ್ಸಿನಡಿಗೆ ಬಿದ್ದು ತೀರಿ ಹೋದರು...."

" ಹೇಗೆ ? "

" ತಂದೆ ರಿಕ್ಷಾ ಎಳೆಯುತ್ತಿದ್ದರು. ಒಂದು ದಿವಸ ಜಾರ್ಜ ಟವುನಿನಲ್ಲಿ, ಹೇಗೆ ಎಂದು ನಮಗೆ ಗೊತ್ತಿಲ್ಲ, ಬಸ್ಸಿನಡಿಗೆ ರಿಕ್ಷಾ ಸಮೇತ

ಬಿದ್ದು, ಆಸ್ಪತ್ರೆಯಲ್ಲಿ ತೀರಿ ಹೋದರು...." ಶಿವನ ಕಂಠ ತುಂಬಿ ಬಂತು. ಕಣ್ಣುಗಳಲ್ಲಿ ನೀರೂರಿತು.

" ಮತ್ತೆ ನೀನೇನು ಮಾಡಿದೆ ?...." ಮುನಿಸ್ವಾಮಿ ತುಸು ತಡೆದು ಕೇಳಿದ.

" ಅಗಸರ ಪೇಟೆಯಲ್ಲಿ ನಾವಿದ್ದೆವು. " ನಮ್ಮ ಗುಡಿಸಲ ಪಕ್ಕದಲ್ಲೇ ನನ್ನ ಮಾವ ಇದ್ದರು. ಅಲ್ಲಿ ಹೋದೆ. ಆದರೆ ಅತ್ತೆ ನನ್ನನ್ನು ಹೊಡೆದು ಬಡೆದು ಓಡಿಸಿದಳು. ಅಲ್ಲಿಗೆ ಮತ್ತೆ ಹೋಗಲಿಲ್ಲ...." ಶಿವನ್ ಕಣ್ಣೀರನ್ನು ಒರೆಸಿಕೊಂಡ.

ಮತ್ತೇನು ಎಂದು ಕೇಳುವಂತೆ ಮುನಿಸ್ವಾಮಿ ಶಿವನ ಮುಖವನ್ನು ನೋಡಿದನು.

" ರಸ್ತೆಯಲ್ಲಿ ಹೋಗುವವರನ್ನು ಬೇಡಿ ಕಾಡಿ ನಾಲ್ಕು ಕಾಸು ಹೇಗಾದರೂ ಸಂಪಾದಿಸಿ ಹೊಟ್ಟೆ ತುಂಬಿಸಿ ಕೊಳ್ಳುತ್ತಿದ್ದೆ...."

ಮುನಿಸ್ವಾಮಿ ಶಿವನನ್ನು ಕನಿಕರದಿಂದ ನೋಡಿದನು, ಹಾಗೇ ತಲೆ ತಗ್ಗಿಸಿ ಯೋಚನಾ ಪರವಶನಾದನು. ಕುಳಿತುಕೊಂಡ ಶಿವನ್ ಅಲ್ಲೇ ನೆಲದ ಮೇಲೆ ಒರಗಿಕೊಂಡನು. ಹಗಲೆಲ್ಲ ಅಲೆದಾಡಿದ ಬಳಲಿಕೆ ಅವನನ್ನು ಮುತ್ತಿಕೊಂಡಿತು. ಶಿವನ ಕಣ್ಣುಗಳು ಬಾಡಿದುವು. ನಿದ್ರೆ ತನ್ನ ತೆಕ್ಕೆಯಲ್ಲಿ ಶಿವನನ್ನು ಸೆಳೆದುಕೊಂಡಿತು........

........ಎಚ್ಚರವಾಗುವಾಗ ಗುಡಿಸಲೊಳಗೆ, ಬಾಗಿಲ ಮೂಲಕ ಸೂರ್ಯನ ರಶ್ಮಿ ಚೆಲ್ಲಿತ್ತು. ಶಿವನ್ ಅವಸರದಿಂದ ಎದ್ದು ಗುಡಿಸಲ ಹೊರ ಬಂದನು. ಅಲ್ಲೇ ಬಾಗಿಲ ಪಕ್ಕದಲ್ಲಿ ಮುನಿಸ್ವಾಮಿ, ನಾಲ್ಕು ಜನ ಧಾಂಡಿಗರೊಡನೆ ಮಾತನಾಡುವುದು ಶಿವನಿಗೆ ಕಾಣಿಸಿತು,

ಶಿವನು ಹೊರ ಬಂದ ಕೂಡಲೇ, ತೀರ ಕಪ್ಪಗಾದ, ಭೀಮ ಕಾಯನೊಬ್ಬ ಮುಂದೆ ಬಂದು ತನ್ನ ಗೊಗ್ಗರ ಧ್ವನಿಯಲ್ಲಿ ಉಲ್ಲಾಸ ದಿಂದ ಅಂದನು:

" ನಿನ್ನೆ ನಿನಗೆ ಸುಮ್ಮನೇ ಹೊಡೆದರು ನೋಡು ! ಚೆಂಡು ಇವೊತ್ತು ಬೆಳಗ್ಗೆ ಅಲ್ಲೇ ಸಂದಿನಾಚೆ ಕಾಣ ಸಿಕ್ಕಿತು....."

ಶಿವನ್ ಮಾತನಾಡಲ್ಲಿಲ್ಲ. ನಾಲ್ವರಲ್ಲಿ ಒಬ್ಬನು ಕೇಳಿದನು:

" ಇನ್ನು ನೀನೆಲ್ಲಿಗೆ ಹೋಗಬೇಕೆಂದಿದ್ದೀ ? "

“ ನನಗೆ ಗೊತ್ತಿಲ್ಲ ! ” ಎಂದು ಹೇಳಲು ಶಿವನ್ ಬಾಯಿ ತೆರೆದಿದ್ದನು. ಆದರೆ ಮುನಿಸ್ವಾಮಿಯೇ ಹೇಳಿದ:

“ ಅವನೆಲ್ಲಿಗೂ ಹೋಗಲಿಕ್ಕಿಲ್ಲ. ನಮ್ಮಲ್ಲೇ ಇರುವವನು ...”

ಶಿವನ್ ಚಕಿತನಾಗಿ ಮುದುಕನ ಮುಖವನ್ನು ನೋಡಿದನು:

“ ಆಗದೇನು ಶಿವನ್ ? ಸುಮ್ಮನೆ ಗತಿಯಿಲ್ಲದೆ ಬೀದಿ ಬೀದಿ ಅಲೆದು ಏನು ಮಾಡುವಿ ? ನನ್ನೊಟ್ಟಿಗೆ ಇರು. ನನಗೆ ಬೇರೆ ಮಕ್ಕಳೂ ಇಲ್ಲ....”

ಕೃತಜ್ಞತೆಯಿಂದ ಶಿವನ ಕುತ್ತಿಗೆಯುಬ್ಬಿ ಬಂತು. ಆದರೂ ತಡವರಿಸುತ್ತಾ ಅವನು ಉಸುರಿದನು:

“ ಬೇಡ.... ಬೇಡ....”

ನಾಲ್ವರು ಧಾಂಡಿಗರು ಒಟ್ಟಿಗೇನೇ ಅಂದರು. “ ಬೇಡ ಯಾಕೋ? ಮತ್ತೆ ಉಪವಾಸ ಮಾಡಿ ಸಾಯಬೇಕೆಂದಿದ್ದೀಯಾ ? ”

ಶಿವನ್ ತಲೆ ತಗ್ಗಿಸಿದ. ಅವನ ಕಣ್ಣ ಮುಂದೆ, ತನ್ನ ಅಲೆದಾಟದ, ಉಪವಾಸದ ಸಂಕಟಮಯ ದಿನಗಳ ಚಿತ್ರಗಳು ಸುಳಿದವು.

“ ನನಗೆ ಗೊತ್ತು. ಅವನು ನನ್ನೊಟ್ಟಿಗೆ ಇರುವನು. ಅಲ್ಲವೇ ಶಿವನ್ ? ” ಮುದುಕ ನಗುತ್ತಾ ಪ್ರಶ್ನಿಸಿದ.

ಹೌದು ಎಂಬಂತೆ ಶಿವನ್ ತಲೆಯಲ್ಲಾಡಿಸಿದ. ನಾಲ್ವರೂ ನಗಾಡಿದರು. “ ಮುನಿಸ್ವಾಮಿ! ಅಂತೂ ಸುಲಭದಲ್ಲಿ ನಿನಗೊಬ್ಬ ಹುಡುಗ ಸಿಕ್ಕಿದ ! ” ಅಂದ ಒಬ್ಬನು. ಅವನ ಮಾತಿನಲ್ಲಿ ಏನೋ ವ್ಯಂಗ್ಯ ತುಂಬಿದಂತೆ, ಅವನ ಮಾತಿನ ಹಿಂದೆ ಏನೋ ಗೂಢ ಅಡಗಿದಂತೆ ಅವನಿಗನಿಸಿತು. ಆದರೆ ಅದೇನು ಎಂದು ಶಿವನಿಗಾಗ ತಿಳಿಯಲಿಲ್ಲ.

---

೨

ಹಗಲು ಕಳೆಯಿತು. ಇರುಳು ಕವಿಯಿತು. ದಿನ ಉರುಳಿತು. ವಾರಗಳು ಸಂದುವು.

ಶಿವನ್ ಮುನಿಸ್ವಾಮಿಯ ಮಗನಂತೆ ಮನೆಯನ್ನು ಬೆಳಗಿಸಿದನು. ಮುನಿಸ್ವಾಮಿಯ ಮುದಿ ಹೆಂಡತಿ ಅವನಿಗೆ ತಾಯಿಯಂತಾದಳು. ಮುನಿಸ್ವಾಮಿ ಸ್ವಲ್ಪ ಹಣವಂತನೇ! ಊಟಕ್ಕೇನೂ ಕೊರತೆಯಿರಲಿಲ್ಲ. ಆದ್ದರಿಂದ ಶಿವನ ಜೀವನ ಸುಖಮಯವಾಯಿತು. ಮುನಿಸ್ವಾಮಿಗೆ ಕೊಂಪೆಯಲ್ಲಿ ಒಳ್ಳೆ ಗೌರವವೂ ಇತ್ತು. ಆ ಕೊಂಪೆಯ ನಿವಾಸಿಗಳೆಲ್ಲ ಮುನಿಸ್ವಾಮಿಯನ್ನು ಕಂಡರೆ 'ಸಲಾಂ' ಹೊಡೆದು ನಮ್ರತೆಯಿಂದ ಮಾತನಾಡಿಸುತ್ತಿದ್ದರು. ಅದನ್ನು ಕಂಡು ಶಿವನಿಗೆ 'ಸಾಕು ತಂದೆ'ಯ ಮೇಲೆ ತುಂಬಾ ಅಭಿಮಾನ. ಅವನೊಡನೆ ಕೊಂಪೆಯ ಗುಡಿಸಲುಗಳನ್ನೆಲ್ಲ ಶಿವನ್ ಸುತ್ತುವನು. ಹೆಂಗುಸು ಮಕ್ಕಳೊಡನೆ ಕಲೆಯುವನು; ಮಾತನಾಡುವನು.

ಶಿವನ ಗುಡಿಸಲ ಪಕ್ಕದಲ್ಲಿ ಪಶ್ಚಿಮದಲ್ಲಿ ಒಂದು ಕಹಿಬೇವಿನ ಮರವಿದ್ದಿತು. ಮರದಿಂದಾಚೆ ತುಸು ಎತ್ತರವಾದ ಗೋಡೆಯಿತ್ತು. ಗೋಡೆಯಾಚೆ ಅಗಲವಾದ, ಹಗಲೆಲ್ಲ ಜನಸಂಚಾರದಿಂದ ತುಂಬಿದ, ಸಿಮೆಂಟಿನ ರಸ್ತೆಯಿತ್ತು. ರಸ್ತೆಯ ಆಚೆ ಪಕ್ಕದಲ್ಲಿ ಚಿಕ್ಕ ಕಾಂಪೌಂಡು ಇತ್ತು. ಅದರೊಳಗೆ ತೀರ ದೊಡ್ಡದಲ್ಲದ ಆದರೂ ಸಣ್ಣದಲ್ಲದ ಬಂಗಲೆಯಿದ್ದಿತು.

ಗುಡಿಸಲುಗಳ ನಡುವಿನ ಓಣಿಯಲ್ಲೇ ಪೂರ್ವಕ್ಕೆ ಹೋದರೆ ಮರಳಿನ ರಾಶಿ ಸಿಗುವದು. ಮರಳರಾಶಿಯನ್ನು ಹಾದು ಮುನ್ನಡೆದರೆ ಸಮುದ್ರದ ತೆರೆಗಳು ಕಾಲುಗಳನ್ನು ತೊಳೆಯುವವು.

ಇದೆಲ್ಲ ಶಿವನ ಪರಿಚಿತ ಲೋಕವಾದುವು. ಶಿವನ್ ಗುಡಿಸಲಿನಿಂದ ಸಾಗರದ ತೀರಕ್ಕೆ ಅಲ್ಲಿಂದ ಗುಡಿಸಲಿಗೆ, ಪುನಃ ಗುಡಿಸಲಿನಿಂದ ರಸ್ತೆಯ ಬದಿಗೆ ಓಡಾಡುವನು.

ಗುಡಿಸಲ ಬದಿಯ ಕಹಿಬೇವಿನ ಮರದಾಚೆಗಿನ ಗೋಡೆಯು ಅವನ ಪ್ರೀತಿಯ ಸ್ಥಳವಾಯಿತು. ಕಾರಣ, ಅದರ ಮೇಲೆ ದಿನಾಲೂ ಸಂಜೆ ಅವನ ಸಾಕು ತಂದೆ ಮುನಿಸ್ವಾಮಿ ಬೀಡಿ ಎಳೆದುಕೊಂಡು ಕುಳ್ಳಿರುವನು. ಶಿವನ್ ಅಲ್ಲಿಗೆ ನಡೆದು ಗೋಡೆಯನ್ನೇರಿ ಅವನೊಡನೆ ಕುಳಿತುಕೊಳ್ಳುವ. ರಸ್ತೆಯಲ್ಲಿ ಹೋಗುವ ಜನರನ್ನು, ಅವರ ಜಿಡಗನ್ನು, ರಭಸದಿಂದೋಡುವ ವಾಹನಗಳನ್ನು, ಅವುಗಳ ಚೆಂದವನ್ನು ವಿಮರ್ಶಿಸುತ್ತಾ ಕಾಲ ಕಳೆಯುವನು.

ಮುನಿಸ್ವಾಮಿ ಮಾತಿನ ಮಲ್ಲ. ಶಿವನ್ ಅಲ್ಲ. ಇನ್ನು ಯಾರೇ ಇರಲಿ ಸಮೀಪ ಕುಳಿತುಕೊಂಡರೆಂದರೆ, ತುದಿಮೊದಲಿಲ್ಲದ ಹರಟೆಯ ನ್ನಾರಂಭಿಸುವನು. ಆ ಹರಟೆ ಶಿವನಿಗೆ ಬಹು ಪ್ರಿಯವಾದುದು! ರಸ್ತೆಯ ಮೇಲೆ ಓಡಾಡುವ ಮೋಟಾರು ಕಾರುಗಳ ಮೇಲೆ, ಅದರೊಳಗೆ ಕುಳಿತ ಮನುಷ್ಯರ ಮೇಲೆ, ಉತ್ತಮ ವಸ್ತ್ರಗಳಿಂದ ಭೂಷಿತರಾದ ಜನರ ಮೇಲೆ ಅವನ ಟೀಕೆ ಇದ್ದೇ ಇದೆ. ಆ ಟೀಕೆಗಳು ಶಿವನಿಗೆ ಅರ್ಥವಾಗ ದಿದ್ದರೂ ಮುದುಕನ ಮಾತಿನ ರಭಸ, ಸ್ವರದ ಏರಿಳಿತ, ಮುಖದ ವಿಕಾರ ಇವೆಲ್ಲ ಬಹು ಚೆನ್ನಾಗಿ ಕಾಣಿಸುತ್ತಿದ್ದುವು.

ಕೊಂಪೆಯ ಬಾಲಕರಿಗೆಲ್ಲ ಮುನಿಸ್ವಾಮಿ ಅಂದರೆ ಅಷ್ಟು ಪ್ರೀತಿ. ಎಲ್ಲರೂ ಸಂಜೆ ಅವನ ಹಿಂದೆ ಕಲೆಯುವರು. ಮುನಿಸ್ವಾಮಿ ನಗೆಯ ಚಟಾಕಿಗಳನ್ನು ಹಾರಿಸಿ ಅವರೆಲ್ಲರನ್ನು ನಗಿಸುವನು. ಕೆಲವು ಹುಡುಗ ರಂತೂ ಅವನ ಬೆನ್ನು ಬಿಡುತ್ತಲೇ ಇರಲಿಲ್ಲ.

ಸಂಜೆ ಗೋಡೆಯ ಮೇಲೆ ಏರಿ, ಶಿವನ್ ಕುಳಿತನೆಂದರೆ ಮುನಿ ಸ್ವಾಮಿ ಆರಂಭಿಸುವನು.

“ನೋಡು, ಶಿವನ್.... ರಸ್ತೆಯ ಆ ಪಕ್ಕದಲ್ಲಿ ಹೋಗುವ ಆ ಮನುಷ್ಯನನ್ನ....”

“ಯಾರು?.... ಸುಮಾರು ಜನರು ಹೋಗುತ್ತಿದ್ದಾರಲ್ಲಾ......” ಶಿವನ್ ಗಲಿಬಿಲಿಗೊಳ್ಳುವನು.

“ಕಾಣುವುದಿಲ್ಲವೇ?.... ಓ ಅಗೋ ಅಲ್ಲಿ ಹೋಗುತ್ತಿದ್ದಾನಲ್ಲಾ! ನೋಡು ಅವನ ಷೋಕಿ!” ಮುನಿಸ್ವಾಮಿ ತಾತ್ಸಾರದಿಂದ ನುಡಿಯು ವನು.

“ಅವನು ಹಾಗೆ ಮಾಡಿದರೆ ನಮಗೇನು ತೊಂದರೆ ಮಾವಾ?” ತನ್ನ ಬಾಲ್ಯ ಸಹಜ ನಿಷ್ಕಲ್ಮಷ ಮನದಿಂದ ಕೇಳುವನು ಶಿವನ್.

ಬೀಡಿಯನ್ನು ಕಚ್ಚಿ ಬಲವಾಗಿ ಹೊಗೆ ಸೇದಿ, ಮುನಿಸ್ವಾಮಿ ಆವೇಶದಿಂದ ಹೇಳುವನು. “ಅವನ ಷೋಕಿಗೆ ಹಣವೆಲ್ಲಿಂದ ಬಂತು ಗೊತ್ತೇ ಶಿವನ್? ನಿನಗೆ ಗೊತ್ತಿಲ್ಲ.... ನೀನಿನ್ನೂ ಸಣ್ಣ ಹುಡುಗ! ನಿನಗೀಗ ಅರ್ಥವಾಗಲಿಕ್ಕಿಲ್ಲ. ಆದರೂ ನೋಡು. ನಮ್ಮ ಈ ಕೊಂಪೆ ಯಲ್ಲಿ ಎಷ್ಟೊಂದು ಗುಡಿಸಲುಗಳಿಲ್ಲ! ನಮ್ಮ ಈ ಜನ ಇಪ್ಪತ್ತುನಾಲ್ಕು

ತಾಸೂ ಹೀಗೆ ದುಡಿಯುವುದಿಲ್ಲ! ಅಷ್ಟು ದುಡಿದರೆ ದಿನವಿಡೀ ಕೈಬಂಡಿ ಎಳೆದರೆ. ರಿಕ್ಷಾ ಎಳೆದರೆ, ಸಿಗುವದೇನು ಶಿವನ್?.... ಗಂಜಿ ನೀರಿಗೂ ಸಾಲದು! ನಮ್ಮ ದುಡಿತದಿಂದ ಲಾಭ ಹೊಂದುವವರು ಈ ಷೋಕಿ ವಾಲರು! ಅಲ್ಲವೇನು?... ''

ಈ ಆವೇಶದ ಮಾತುಗಳು ಶಿವನಿಗೆ ಅರ್ಥವಾಗುವುದಿಲ್ಲ. ಅವು ಅವನ ಜ್ಞಾನದ ಮೇರೆಯನ್ನು ಬಹುಶಃ ಮೀರಿ ನಿಂತಿದ್ದುವೇನೋ! ಅರ್ಥವಾಗದೆ ಶಿವನ್ ಮುದುಕನ ಮುಖವನ್ನು ಪಿಳಪಿಳನೆ ನೋಡುವನು. ಹುಡುಗನಿಗೆ ಅರ್ಥವಾಗಿಲ್ಲವೆಂಬುದನ್ನು ಗಣನೆಗೆ ತಾರದೆ ಮುನಿಸ್ವಾಮಿ ಏನೇನೋ ಹರಟುವನು. ದಾರಿಹೋಕರನ್ನು ಹಂಗಿಸುವನು. ತಮ್ಮಂಥವರ ಬೆವರಿನಿಂದಲೇ ಆ ಜನ ಸುಖಿಗಳಾದವರು ಎಂಬುದು ಮುನಿಸ್ವಾಮಿಯ ವಾದ! ಅದು ಹೇಗೆ? ಎಂದು ಮುನಿಸ್ವಾಮಿಯನ್ನು ಶಿವನ್ ಕೆಲವೊಂದು ಬಾರಿ ವಿಚಾರಿಸಿದುದುಂಟು. ಮುನಿಸ್ವಾಮಿ ಅದಕ್ಕೆ ಉತ್ತರ ಕೊಡಲಾರ. ಆದರೂ, ಶ್ರೀಮಂತರನ್ನು ಬಯ್ಯಲು ಹಿಂದುಮುಂದು ನೋಡಲಾರನು.

ಶಿವನಿಗೆ ಮುನಿಸ್ವಾಮಿಯ ಜೀವನ ವಿಚಿತ್ರಮಯವಾಗಿ ಕಾಣಿಸುತ್ತದೆ. ಅವನೊಡನೆ, ಇರತೊಡಗಿದ ನಾಲ್ಕು ದಿನಗಳನಂತರ ತಾನು ಪಟ್ಟಣವತ್ತ ಹೋಗಿ ಏನಾದರೂ ಕೂಲಿ ಮಾಡಿ ನಾಲ್ಕು ಕಾಸು ತರುತ್ತೇನೆಂದು ಶಿವನ್ ಹೊರಟುದುಂಟು. ಮುದುಕನಿಗೆ ತಾನು ಭಾರವಾಗಬಾರದು ಎಂದು ಅವನ ಬಯಕೆ. ಕೆಲಸಕ್ಕೆ ಹೊರಟು ನಿಂತಾಗ ' ನೀನೆಲ್ಲಿಯೂ ಕೆಲಸಕ್ಕೆ ಹೋಗಕೂಡದು. ಎಷ್ಟು ದುಡಿದರೂ ನಿನಗೆ ಸಿಗುವುದು ನಾಲ್ಕಾಣೆ. ಹಣ ಸಂಪಾದನೆಗೆ ಬೇರೆ ಸುಲಭದ ಹಾದಿಯಿದೆ. ಈಗ ಮನೆಯಲ್ಲೇ ಕುಳಿತುಕೋ' ಎಂದು ಮುನಿಸ್ವಾಮಿ ಹೇಳಿದ್ದ. ಹಣ ಸಂಪಾದನೆಗೆ ಬೇರೆ ಸುಲಭದ ಹಾದಿ ಇದೆ ಎಂದು ಹೇಳಿದ ಮುನಿಸ್ವಾಮಿ ಆ ಹಾದಿ ಯಾವುದು ಎಂದು ತೋರಿಸಿ ಕೊಡಲಿಲ್ಲ.... ಮುನಿಸ್ವಾಮಿ ಕೆಲಸಕ್ಕೆ ಹೋಗುವುದನ್ನೂ ಶಿವನ್ ನೋಡಲಿಲ್ಲ ಆ ಕೊಂಪೆಯಲ್ಲಿನ ಹೆಚ್ಚಿನವರು ರಿಕ್ಷಾವಾಲರಿದ್ದರು: ಕೈಬಂಡಿ ಎಳೆಯುವವರಿದ್ದರು; ಮೀನುಗಾರರೂ ಇದ್ದರು. ಎಲ್ಲರೂ ಒಂದಲ್ಲ ಇನ್ನೊಂದು ಕೆಲಸದಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ಆದರೆ ಮುನಿಸ್ವಾಮಿಗೆ ಯಾವ ಕೆಲಸವೂ ಇರಲಿಲ್ಲ.

ರಾತ್ರಿ ಮುನಿಸ್ವಾಮಿ ಮತ್ತು ಶಿವನ್ ಹತ್ತಿರ ಹತ್ತಿರವೇ ಮಲಗಿಕೊಳ್ಳುತ್ತಿದ್ದರು. ಶಿವನು ಮಾತ್ರ ನಸುಕಿನಲ್ಲೇ ಏಳುತ್ತಾನೆ. ಮುನಿಸ್ವಾಮಿ ಮಾತ್ರ ವೈಗಳ್ಳನಂತೆ ಹತ್ತು ಹನ್ನೊಂದು ಗಂಟೆಯ ತನಕ ನಿದ್ದೆ ಮಾಡುತ್ತಾನೆ. ಇವನೇಕೆ ಇಷ್ಟು ನಿದ್ದೆ ಮಾಡುತ್ತಾನೋ ಎಂದು ಶಿವನಿಗೆ ಆಶ್ಚರ್ಯವೋ ಆಗಿತ್ತು. ಅವನು, ಮುನಿಸ್ವಾಮಿಯ ಹೆಂಡತಿಯೊಡನೆ ಇದಕ್ಕೆ ಕಾರಣವನ್ನು ಕೇಳಿದ್ದನು. 'ಇಲ್ಲ! ಇಲ್ಲ! ಅವರ ಅಭ್ಯಾಸವೇ ಅದು!' ಎಂದು ಗಲಿಬಿಲಿಯಿಂದ ಉತ್ತರವಿತ್ತಿದ್ದಳಾಕೆ. ಹಾಗೆ ಹೇಳುವಾಗ ಅವಳ ಮುಖವೇಕೆ ಬಿಳುಪಾಯಿತು ಎಂದು ಶಿವನಿಗೆ ತಿಳಿಯಲಿಲ್ಲ.

ಆದರೆ ಒಂದು ರಾತ್ರಿ........

ಶಿವನಿಗೇಕೋ ತಟ್ಟನೆ ಹೊಡೆದೆಬ್ಬಿಸಿದಂತೆ ಎಚ್ಚರವಾಗಿತ್ತು. ಪಕ್ಕದಲ್ಲಿರಬೇಕಾದ ಮುನಿಸ್ವಾಮಿ ಅವನಿಗೆ ಪಕ್ಕದಲ್ಲಿ ಕಾಣಿಸಲಿಲ್ಲ. ಮುನಿಸ್ವಾಮಿಗಾಗಿ ಅವನು ಅಚೀಚೆ ತಲೆಯಲ್ಲಾಡಿಸಿದನು ಗುಡಿಸಲ ಮೂಲೆಯಲ್ಲಿ ಮಿಣಮಿಣನೆ ಉರಿಯುವ ದೀಪದೆದುರು ಅವನಿಗೆ ಐದು ಜನರು ಕಾಣಿಸಿಕೊಂಡರು! ಮಲಗಿದಲ್ಲೇ ಶಿವನ್ ಸೂಕ್ಷ್ಮವಾಗಿ ನೋಡಿದನು.

ಐವರಲ್ಲಿ ಒಬ್ಬನು ಮುನಿಸ್ವಾಮಿ! ಉಳಿದ ನಾಲ್ವರು, ತಾನು ಗುಡಿಸಲಿಗೆ ಬಂದ ಮೊದಲಿನ ಬೆಳಗಿನಲ್ಲಿ ಕಂಡ ನಾಲ್ವರು ಧಾಂಡಿಗರು ಎಂದು ಶಿವನಿಗೆ ತಿಳಿಯಿತು! ಅವರೇನು ಮಾತಾಡುತ್ತಿದ್ದಾರೆ? ಕುತೂಹಲದಿಂದ ಶಿವನ್ ಕಿವಿಗೊಟ್ಟನು.

"ತೋಟಗಾರನೊಡನೆ ನಾ ಮಾತನಾಡಿ ಬಂದಿದ್ದೇನೆ" ಕೀರ ಕಪ್ಪಗಾದ, ಭೀಮಕಾಯದ ಗೊಗ್ಗರ ಧ್ವನಿಯವನು ಹೇಳುತ್ತಿದ್ದನು. "ಹಿತ್ತಿಲ ಹಿಂದಿನ ಬಾಗಿಲ ಬಳಿ ಸಿಳ್ಳು ಹಾಕಿದ ಕೂಡಲೇ ಅವನು ಬಾಗಿಲು ತೆರೆಯುತ್ತಾನೆ ಒಳಗೆ ಹೋಗಿ ಟೆರೇಸ್ಸಿಗೆ ಹೋಗುವ ನೀರ ಕೊಳವೆಯಿಂದ ಮೇಲೇರಿ ಮನೆಯೊಳಕ್ಕೆ ಪ್ರವೇಶಿಸಬಹುದು...."

"ಇಂದೇ ಒಳ್ಳೆಯ ದಿನ" ಇನ್ನೊಬ್ಬನು ಹೇಳುತ್ತಿದ್ದನು "ಮನೆಯಲ್ಲಿ ಯಜಮಾನನ ಹೊರತು ಮಿಕ್ಕೆಲ್ಲರೂ ಊರಿಗೆ ಹೋಗಿದ್ದಾರೆ. ಯಜಮಾನ ಎಚ್ಚರಗೊಂಡು ಬೊಬ್ಬೆ ಆರಂಭಿಸಿದರೆ ಎರಡಿಟ್ಟರೆ ಸರಿ...."

ಇವರು ಯಾವ ವಿಚಾರ ಮಾತನಾಡುತ್ತಿದ್ದಾರೆಂದು ತಿಳಿಯಲು ಶಿವನಿಗೆ ಸ್ವಲ್ಪ ಹೊತ್ತು ಹಿಡಿಯಿತು.

ಇವರು ಮತ್ತೆ ಎದ್ದು ಹೊರಹೋಗಲು, ಶಿವನಿಗೆ ತಿಳಿಯಿತು ಇವರು ಕಳ್ಳತನಕ್ಕಾಗಿ ಹೋಗುತ್ತಿದ್ದಾರೆಂದು! ದರೋಡೆಖೋರರು!! ಶಿವನ್ ದಂಗು ಬಡಿದು ಹೋದನು! ತನ್ನನ್ನು ಸಾಕಿದವನು, ಕಣ್ಣು ಕತ್ತಲೆ ಬಂದು ಕುಸಿದು ಬಿದ್ದ ತನ್ನನ್ನು ಎತ್ತಿ ತಂದು ಕರುಣೆಯಿಂದ ನೋಡಿದವನು ಕಳ್ಳ! ಕೊಂಪೆಯುವರ ಗೌರವಕ್ಕೆ ಬಾಧ್ಯಸ್ಥನಾದವನು, ಮಕ್ಕಳ ಪ್ರೀತಿಯನ್ನು ಗಳಿಸಿದವನು. ಶ್ರೀಮಂತರನ್ನು ಹಳಿಯುವವನು ದರೋಡೆಖೋರ!!

ದುಃಖ ಕಳವಳಗಳಿಂದ ಶಿವನ್ ಬೆಂದು ಹೋದನು. ಆದರೂ ಅವನು ಏನೊಂದೂ ಶಬ್ದವೆಬ್ಬಿಸಲಿಲ್ಲ. ಅಲುಗಾಡದೆ ನಿದ್ದೆ ಬಂದವನಂತೆ ಮಲಗಿಕೊಂಡನು. ಅವನ ಹೃದಯದೊಳಗಿನ ವೇದನೆ ಹೇಳತೀರದು. ಆ ಅನ್ಯಾಯದ ಜೀವನ ಶಿವನಿಗೇಕೋ ಹಿಡಿಸಲಿಲ್ಲ. ಅವನು ತಂದೆ-ತಾಯಿಯ ರೊಡನೆ ವಾಸವಾಗಿರುವಾಗ, ತನ್ನ ಗುಡಿಸಲ ಪಕ್ಕದಲ್ಲಿನ ಕಳ್ಳತನಕ್ಕೆ ಹೋದವನು, ಒಂದು ಕೊಲೆಯ ಅಪಾದನೆಗೆ ಒಳಗಾಗಿ ಫಾಶಿ ಶಿಕ್ಷೆಯನ್ನು ಎದುರಿಸಬೇಕಾಯಿತು. ಅವನ ತಾಯಿ ಮತ್ತು ತಂದೆ, ಅಂತಹ ನೀಚವೃತ್ತಿಗಿಳಿಯಬಾರದೆಂದು, ಅಂತಹ ಅಧರ್ಮದ ಕೆಲಸಗಳನ್ನು ಮಾಡಬಾರದೆಂದು ಅವನಿಗೆ ಬಾಲ್ಯದಿಂದಲೂ ಬೋಧಿಸಿದ್ದರು. ಈಗ ಶಿವನಿಗೆ ಅವೆಲ್ಲವೂ ಸ್ಮರಣೆಗೆ ಬಂದುವು. ತಂದೆ-ತಾಯಿಯರ ನೆನಪು ಉಕ್ಕಿ ಬಂದಿತು. ಅವರ ಪ್ರಾಮಾಣಿಕ ಜೀವನದ ಚಿತ್ರ ಕಣ್ಣಮುಂದೆ ತೇಲಿ ಬಂತು. ಆ ಭೀಕರ ರಾತ್ರಿ. ಆ ಬಿರುಗಾಳಿ ಮಳೆ, ಕುಸಿದು ಬಿದ್ದ ಗುಡಿಸಲಡಿಯಲ್ಲಿ ತೀರಿದ ತಾಯಿ. ಅಪಘಾತದಿಂದ ಕಾಲವಶನಾದ ತಂದೆ, ಮತ್ತೆ ಅತ್ತೆಮನೆಯ ಜೀವನ, ಅನಂತರದ ಅಲೆದಾಟ, ಉಪವಾಸ ಮತ್ತು ಇಲ್ಲಿಗೆ ಬಂದುದು... ಎಲ್ಲವೂ ಒಂದರ ಹಿಂದೊಂದು ಕಣ್ಣ ಮುಂದೆ ಬಂದು, ಕಣ್ಣುಗಳಲ್ಲಿ ನೀರೂರಿಸಿದವು. ಕಳ್ಳನ ಮನೆಯಿಂದ ಓಡಿಹೋಗಬೇಕೆಂದು ಉದ್ವೇಗದಿಂದ ನೆನೆದವನಿಗೆ, ತನ್ನ ಅಲೆದಾಟದ, ಉಪವಾಸದ, ಸಂಕಟಮಯ ದಿನಗಳ ನೆನಪಾಗಿ ಅತೃಪ್ತಿಯಿಂದ ಶಿವನ್ ಅಲ್ಲೇ ಮಲಗಿಕೊಂಡನು; ಓಡಿ ಹೋಗಲಿಲ್ಲ. ಮಲಗಿದವನನ್ನು ನಿದ್ರೆಯೂ ಮುಸುಕಿಬಿಟ್ಟಿತು.

ಮರುದಿನ ಎಂದಿನಂತೆ ಶಿವನ್ ನಸುಕಿನಲ್ಲಿ ಎದ್ದನು. ಎಂದಿನಂತೆ ಕಡಲ ತೀರಕ್ಕೆ ನಡೆದನು. ಹಿಂದೆ ಬಂದು ಗಂಜಿ ಊಟ ತೀರಿಸಿದನು. ಸುಮಾರು ಹೊತ್ತು ಕಳೆದರೂ ಮುನಿಸ್ವಾಮಿ ಎಚ್ಚರಗೊಳ್ಳಲಿಲ್ಲ. ಅವನಿಗೆ ರಾತ್ರಿ ನಿದ್ರೆ ಇರಲಿಲ್ಲವೆಂದು ಶಿವನಿಗೆ ಗೊತ್ತು!

ಹತ್ತು ಗಂಟೆಗೆ ಮುನಿಸ್ವಾಮಿ ಎಚ್ಚತ್ತನು. ಎಂದಿನಂತೆ ವಿನೋದವಾಗಿ ಹರಟತೊಡಗಿದನು. ಕೊಂಪೆಯ ಬಾಲಕರು ಎಂದಿನಂತೆ ಅವನ ಬೆನ್ನು ಬಿಡಲಿಲ್ಲ. ಭಸ್ಮವಾದ ಬೀಡಿಗಳ ಸಂಖ್ಯೆ ಹೆಚ್ಚು ಕಡಮೆಯೇನೂ ಆಗಲಿಲ್ಲ. ನಾಲ್ವರು ಧಾಂಡಿಗ ಗೆಳೆಯರು ಒಂದು ಹರಟೆ ಹೊಡೆಯುದಿರಲಿಲ್ಲ. ಆದರೆ ಆ ದಿನ ಶಿವನ್ ಮಾತ್ರ ಮುನಿಸ್ವಾಮಿಯೊಡನೆ ಮಾತನಾಡಲಿಲ್ಲ. ಮುನಿಸ್ವಾಮಿ 'ಏನು ಶಿವನ್, ಸೌಖ್ಯವಿಲ್ಲವೇ?' ಎಂದು ಪ್ರಶ್ನಿಸಿಯೂ ಪ್ರಶ್ನಿಸಿದ. ಆದರೆ ಮಾತನಾಡಲು ಶಿವನಿಗೆ ಮನವೇ ಬಾರದು. ಏಕೋ ತಾತ್ಸಾರ. ಏಕೋ ಜಿಗುಪ್ಸೆ. ಮುನಿಸ್ವಾಮಿಯ ವಂಚಕ ನಡತೆ ಶಿವನ ಎಳೆ ಮನಸ್ಸಿನ ಮೇಲೆ ಏನೋ ಪೆಟ್ಟು ಹೊಡೆದಿತ್ತು.

----

೪

ಆ ಕೊಂಪೆಗೆ ಆಗಮಿಸಿದ ಮೊದಲ ರಾತ್ರಿ, ದೀಪ ಹಿಡಿದುಕೊಂಡು ತನ್ನ ಬಳಿಗೆ ಬಂದ ಬಾಲಕ ಕಣ್ಣನಿಗೂ ಶಿವನಿಗೂ ಗೆಳೆತನ ಬೆಳೆದಿತ್ತು. ಕಣ್ಣ ಹತ್ತು ವರ್ಷದ ಚುರುಕು ಬಾಲಕ. ನೋಡಲಿಕ್ಕೆ ಕಪ್ಪು ಕಪ್ಪಾದ ಅಚ್ಚುಕಟ್ಟಿನ ದೇಹ ಅವನದು. ಒಳ್ಳೇ ಶಕ್ತಿಶಾಲಿಯೂ ಆಗಿದ್ದನು. ಪಟ್ಟಣದಲ್ಲಿ ಆಚೀಚೆ ಪೆಟ್ಟಿಗೆ, ಸಾಮಾನುಗಳನ್ನು ಹೊತ್ತು ನಾಲ್ಕು ಕಾಸು ಸಂಪಾದಿಸುತ್ತೇನೆ ಎಂದವನು ಈಗಾಗಲೇ ಹೆಮ್ಮೆ ಪಟ್ಟುಕೊಳ್ಳುತ್ತಿದ್ದನು. ಮುನಿಸ್ವಾಮಿಯ ಮನೆಯಲ್ಲಿ ಚೇತರಿಸಿದ ದಿನ ಸಂಜೆ ಕಣ್ಣ ಶಿವನನ್ನು ಕಾಣಲು ಬಂದಿದ್ದ.

" ....ನಿನಗೆ ಸುಮ್ಮನೆ ಹೊಡೆದೆವು. ಚೆಂಡು ಅಲ್ಲೆ ಕಸದ ಗುಂಡಿಯಲ್ಲಿ ಬಿದ್ದುಕೊಂಡಿತ್ತು...." ಕಣ್ಣ ಕ್ಷಮಾ ಯಾಚನೆಯ ದನಿಯಲ್ಲಿ ಹೇಳಿದ್ದ.

ಶಿವನಿಗೆ ಉಸಿರೆತ್ತಲೇ ಅಷ್ಟು ಸಂಕೋಚವಾಗಿತ್ತು. ಆದರೂ ತಡವರಿಸುತ್ತಾ ನುಡಿದನು:

" ಅದರಲ್ಲೇನು ?.... ನನಗೇನೂ ನೋವಾಗಲಿಲ್ಲ !.... "

" ನೋವಾಗಲಿಲ್ಲ ಎಂದು ಸುಮ್ಮನೆ ಹೇಳುತ್ತೀ ! ನೋವಾಗದಿರುತಿದ್ದರೆ ಹಾಗೆ ಕಣ್ಣು ಕತ್ತಲೆ ಬರುತ್ತಿತ್ತೇ ? ..." ತೀರ ಸಮೀಪದಲ್ಲಿ ಕುಳಿತುಕೊಳ್ಳುತ್ತಾ ಕಣ್ಣ ಪ್ರಶ್ನಿಸಿದ.

" ಇಲ್ಲ ! ಹಾಗೇನೂ ಇಲ್ಲ !.... ಒಂದು ದಿನದಿಂದ ನಾ ಏನೂ ತಿಂದಿರಲಿಲ್ಲ .."

" ಓಹೋ !.... ಅಂದರೆ ನಿನಗೆ ತಂದೆ-ತಾಯಿ...."

" ನನಗೆ ಯಾರೂ ಇಲ್ಲ...."

" ಓ ! " ಕಣ್ಣ ಕನಿಕರದಿಂದ ಉದ್ಗರಿಸಿ, ಶಿವನ ವಿಚಾರವನ್ನೆಲ್ಲ ತಿಳಿದುಕೊಂಡನು. ತನ್ನ ಕತೆಯನ್ನು ವಿಶದವಾಗಿ ಶಿವನ್, ಮತ್ತೊಮ್ಮೆ ಕಣ್ಣನ ಮುಂದೆ ಹೇಳಿದ. ಸ್ನೇಹದ ಪಾಶ ಇಬ್ಬರನ್ನೂ ಬಿಗಿಯ ತೊಡಗಿತು.

" ಇಲ್ಲಿಯೇ ಸುಮ್ಮನೆ ಕುಳಿತು ಏನು ಮಾಡುವಿ ? " ಕಣ್ಣ ವಿಚಾರಿಸಿದ ಕಡೆಗೆ.

" ಏನೂ ಇಲ್ಲ...."

" ಏನೂ ಇಲ್ಲ ಅಂದರೆ ? "

" ಮತ್ತೆ ನಾನೇನು ಮಾಡಲಿ ? "

" ನನ್ನೊಡನೆ ಬಾ ! ಸಮುದ್ರ ತೀರಕ್ಕೆ ಹೋಗೋಣ. ಆಡೋಣ...."

ಅಂತೆಯೇ, ಕಣ್ಣನೊಡನೆ ಶಿವನ್ ಗುಡಿಸಲ ಹೊರಗೆ ಬಂದಿದ್ದ. ಕಣ್ಣ ಕೊಂಪೆಯ ತನ್ನ ಗೆಳೆಯರಿಗೆಲ್ಲ ಶಿವನ ಪರಿಚಯ ಮಾಡಿಕೊಟ್ಟ. ಎಲ್ಲರೂ ಸಮುದ್ರತೀರಕ್ಕೆ ಹೋದರು. ಕತ್ತಲು ಕವಿಯುವ ತನಕ ಆಡಿದರು.

"ದಿನಾಲು ಸಂಜೆ ನಾವಿಲ್ಲಿ ಆಡುತ್ತೇವೆ. ನೀನೂ ಬಾ..." ಕಣ್ಣನಂದ.

"ಹೂಂ" ಎಂದು ತಲೆಯುಲ್ಲಾಡಿಸಿ ಶಿವನ್ ತನ್ನ ಗುಡಿಸಲಿಗೆ ಹೊರಟು ಹೋದ. ಅಂದಿನಿಂದ ಅವರಿಬ್ಬರಲ್ಲೂ ನಿಕಟ ಸ್ನೇಹ ಬೆಳೆಯಿತು.

ಅಂದು ಸಂಜೆ ಗೊಡೆಯ ಮೇಲೆ ಕುಳಿತುಕೊಂಡ ಮುನಿಸ್ವಾಮಿಯೆಡೆಗೆ ಹೋಗಲು ಶಿವನ ಮನಸ್ಸು ಕೇಳಲಿಲ್ಲ. ಒಬ್ಬನೇ ಆಗಿ ಕುಳಿತುಕೊಳ್ಳಲೂ ಬೇಸರವೇ ಆಯಿತು. ಅಂತೆಯೇ ಕಣ್ಣನು ಸಮುದ್ರತೀರದಲ್ಲಿರಬಹುದೆಂದು ಊಹಿಸಿ ಅಲ್ಲಿಗೆ ನಡೆದ. ವಿಹಾರಕ್ಕೆ ಬಂದ ಜನಸಂದಣಿಯಲ್ಲಿ ಕಣ್ಣನನ್ನು ಹುಡುಕಿ ಬೇಸತ್ತನು. ಅಷ್ಟರಲ್ಲಿ ಸಂಜೆ ಕತ್ತಲೂ ಕವಿಯತೊಡಗಿತ್ತು.

ಸಮುದ್ರತೀರದಲ್ಲಿ ಕಣ್ಣನನ್ನು ಕಾಣದೆ ಅವನ ಗುಡಿಸಲಿಗೆ ನಡೆದನು ಶಿವನ್. ಓಣಿಯನ್ನು ಸೇರಿ, ಗುಡಿಸಲ ಬಳಿಗೆ ಹೋಗುವ ಸಂದಿನೊಳಗೆ ತೂರಿ ಮುಂದೆ ಸರಿದು, ಕಣ್ಣನ ಗುಡಿಸಲಿನ ಮುಂದೆ ನಿಂತು ಮೆಲ್ಲನೆ 'ಕಣ್ಣ !' ಎಂದು ಕೂಗಿದ. ಆದರೆ ಉತ್ತರ ಸಿಗಲಿಲ್ಲ. ಉತ್ತರ ಕೊಡುವವರಾದರೂ ಯಾರಿರುವರು ಎಂದು ಊಹಿಸಿದ ಶಿವನ್. ಕಣ್ಣನಿಗೆ ತಾಯಿಯಿರಲಿಲ್ಲ. ಎಂದೋ ತೀರಿ ಹೋಗಿದ್ದಳು. ತಂದೆಯೆಲ್ಲಿಯೋ ಕೆಲಸದ ಮೇಲೆ ಹೋಗಿರಬಹುದು. ಕಣ್ಣನೆಲ್ಲಿ ತಿರುಗಾಡಲು ಹೋಗಿದ್ದಾನೋ? ಶಿವನ್ ಹಿಂತಿರುಗಿ ಹೋಗುವವನು; ಆದರೆ ಗುಡಿಸಲು ಬಾಗಿಲು ತುಸುವೇ ತೆರೆದುಕೊಂಡ ಕಾರಣ, ಇಣಿಕಿ ಒಳಗೆ ನೋಡಿ ಹೋಗಬಹುದೆಂದು ಊಹಿಸಿದ.

ಇಣಿಕಿ ನೋಡುವಾಗ ಶಿವನಿಗೆ ಪರಿಚಿತರಾದ ನಾಲ್ವರು ಧಾಂಡಿಗರು ಕಾಣಿಸಿಕೊಂಡರು. ಮುನಿಸ್ವಾಮಿಯೂ ಅಲ್ಲಿ ಕುಳಿತಿದ್ದ. ಕಣ್ಣನೂ ಅವರೊಟ್ಟಿಗಿದ್ದ. ಒಟ್ಟಿಗೆ ಕುಳಿತು ಅವರೇನೋ ಪಿಸುಪಿಸನೆ ಮಾತನಾಡಿಕೊಳ್ಳುತ್ತಿದ್ದರು. ಶಿವನ್ ಕುತೂಹಲದಿಂದ ಕೇಳಿದನು.

"ಹುಡುಗಿ ಆರು ಗಂಟೆಗೆ ಕಡಲ ತೀರಕ್ಕೆ ಚಿಪ್ಪು ಹೆಕ್ಕಲು ಬರುತ್ತಾಳೆ. ಅಲ್ಲಿಗೆ ನೀನು ಹೋಗಬೇಕು. ಹೋಗಿ ಅವಳೊಡನೆಯೇ ಚಿಪ್ಪುಗಳನ್ನು ಹೆಕ್ಕುತ್ತಾ 'ಎಷ್ಟು ಚೆಂದವಿವೆ ಈ ಚಿಪ್ಪುಗಳು!' ಎಂದು

ಹೇಳಬೇಕು. ಆವಳು ನಿನ್ನ ಬಳಿ ಮಾತನಾಡಲು ತೊಡಗುವಳು 'ನನ್ನ ಮನೆಯಲ್ಲಿ ಇದಕ್ಕಿಂತಲೂ ಚೆಂದವಾದ ಚಿಪ್ಪುಗಳಿವೆ. ಬಾ, ಕೊಡುತ್ತೇನೆ' ಅನ್ನಬೇಕು ನೀನು. ಅವಳನ್ನು ಕರಕೊಂಡು ಇಲ್ಲಿಗೆ ಬರಬೇಕು. ಮುಂದಿನ ಕೆಲಸವನ್ನೆಲ್ಲ ನಾವು ಮಾಡುತ್ತೇವೆ. ಅರ್ಥವಾಯಿತೇ ಕಣ್ಣ ?..." ಕಣ್ಣನ ತಂದೆ, ಗೊಗ್ಗರ ದನಿಯವನು ಹೇಳುತ್ತಿದ್ದನು.

"ಅವಳನ್ನು ಹಿಡಿದು ಆಭರಣಗಳನ್ನು ಕಸಿದೆವೆಂದು ತಿಳಿದುಕೋ. ಆದರೆ ಅವಳು ಮನೆಗೆ ಹೋಗಿ ತಂದೆ-ತಾಯಿಯರೊಡನೆ ದೂರು ಹೇಳಿದರೆ ?...." ಮುನಿಸ್ವಾಮಿ ಹೇಳಿದುದು ಶಿವನಿಗೆ ಕೇಳಿಸಿತು.

"ಅದಕ್ಕೊಂದು ಉಪಾಯ ಮಾಡಬಹುದು" ಗೊಗ್ಗರ ಧ್ವನಿಯವನು ಹೇಳಿದನು "....ಹುಡುಗಿಯನ್ನು ಬಿಡುವುದೇ ಬೇಡ. ರಾತ್ರಿ ಅವಳನ್ನು ಸಮುದ್ರಕ್ಕೆ ಬಿಸಾಡಿದರಾಯಿತು"

"ಸಮುದ್ರಕ್ಕೆ ಬಿಸಾಡುವುದು!" ಒಬ್ಬ ಗಾಬರಿಯಿಂದ ಉದ್ಗರಿಸಿದ.

ಬೇರೆ ಉಪಾಯವಿಲ್ಲ! ಇಲ್ಲವಾದರೆ ನಮಗೆ ಜೈಲಾಗುವುದು. ಚಿಪ್ಪು ಹೆಕ್ಕಲು ಬಂದವಳನ್ನು ತೆರೆಗಳು ಕೊಂಡೊಯ್ದುವು ಎಂದು ಹೆಣ ಸಿಕ್ಕುವಾಗ ಹೇಳುವರು. ಅದರಿಂದ ನಮಗೇನೂ ತೊಂದರೆಯಿಲ್ಲ!"

"ಆದರೆ ಆಭರಣವಿಲ್ಲದೆ ಹೆಣವನ್ನು ಕಂಡಾಗ, ಆಭರಣಕ್ಕಾಗಿ ಯಾರಾದರೂ ಕೊಲೆ ಮಾಡಿರಬಹುದು ಎಂಬ ಸಂಶಯ ಬಾರದೇ ?..." ಮುನಿಸ್ವಾಮಿಯ ಸ್ವರ ಕೇಳಿಸಿತು.

ಅದರಿಂದಷ್ಟು ತೊಂದರೆಯಿಲ್ಲ. ಅವಳು ಜೀವಂತವಾಗಿ ಉಳಿಯುವುದಿಲ್ಲವಷ್ಟೆ, ಕದ್ದವರು ಯಾರು ಎಂದು ಹೇಳಲು?" ಗೊಗ್ಗರ ಧ್ವನಿಯವನಂದನು. "ಕಣ್ಣ, ನೀನು ಪ್ರಯತ್ನ ಮಾಡು........ಗಂಟೆ ಆರಾಗಲಿಕ್ಕಾಯಿತು.... ಹೂಂ, ಹೊರಡು...."

ಶಿವನ್ ದಂಗು ಬಡಿದು ಹೋದನು. ಕೈಕಾಲುಗಳೇ ಮರ ಕಟ್ಟಿದಂತಾದುವು! ಇವರು ಆಭರಣಕ್ಕಾಗಿ ಯಾವಳೋ ಹುಡುಗಿಯನ್ನು ಕೊಲೆ ಮಾಡಲಿರುವರು! ಶಿವನ ಹೃದಯದ ಕಳವಳ, ಕೋಲಾಹಲ ಹೇಳತೀರದು.... ಇದೀಗ ಕಣ್ಣ ಹೊರಬರುವನೆಂದು ತಿಳಿದು ಶಿವನ್

ಓಣಿ ಸೇರಿದನು. ಕಣ್ಣ ! ಅವನೂ ಈ ಕೆಲಸ ಮಾಡುವವನೇ ? ಶಿವನಿಗೆ ಪ್ರಾಣ ಸಂಕಟವಾಯಿತು.

ಓಣಿಯಲ್ಲೇ ಶಿವನ್ ಕಣ್ಣನಿಗಾಗಿ ನಿಂತುಕೊಂಡ. ಅಷ್ಟರಲ್ಲೇ ಕಣ್ಣನೂ ಓಣಿಗಿಳಿದನು. ಅವನನ್ನು ಕಂಡು ಶಿವನ್ ನೋವಿನಿಂದ 'ಕಣ್ಣ !' ಎಂದು ಕೂಗಿದನು. 'ಕಣ್ಣ ! ಈ ಕೆಲಸ ಮಾಡಬೇಡ !' ಎಂಬ ಯಾಚನೆಯ ದೈನ್ಯತೆ ಎಷ್ಟು ತುಂಬಿತ್ತು ಅವನ ಕರೆಯಲ್ಲಿ !

"ಏನು ಶಿವನ್ ?" ಕಣ್ಣ ಕೇಳಿದನು.

"ಕಣ್ಣ !...ಕಣ್ಣ ! ನಾವು ಆಡಲು ಹೋಗೋಣವೇ ?" ಶಿವನ್ ಕೇಳಿದನು.

"ಇಲ್ಲ ಶಿವನ್ ! ನನಗೆ ಸ್ವಲ್ಪ ಕೆಲಸವಿದೆ...." ಎನ್ನುತ್ತಾ ಕಣ್ಣ ಕಡಲ ತೀರದತ್ತ ಓಡಿದನು.

ಒಂದು ಹೆಜ್ಜೆ ಮುಂದೆ ಸರಿದು 'ಕಣ್ಣ !' ಎಂದು ಕಳವಳದಿಂದ ಕೂಗಿದನು ಶಿವನ್.

ಆದರೆ ಕಣ್ಣ ಹಿಂತಿರುಗಿ ನೋಡಲಿಲ್ಲ. ಕರೆಗೆ ಓ ಗೊಡಲಿಲ್ಲ. ಅವಸರದಿಂದ ಕಣ್ಮರೆಯಾದನು. ಶಿವನ ಕಣ್ಣುಗಳಲ್ಲಿ ನೀರು ತುಂಬಿತು. ಅವನ ಕೈ ಕಾಲುಗಳು ಕಂಪಿಸಿದುವು.

ಮುಚ್ಚಂಜೆಯಾಗುವುದರಲ್ಲಿತ್ತು. ಓಣಿಯಲ್ಲಿ ಕೊಂಪೆಯ ಬತ್ತಲೆ ಬಾಲಕರ ಹಾರಾಟ ಒಂದೇ ಸಮನೆ ಸಾಗಿತ್ತು. ಅರೆಬತ್ತಲೆ ಬಡಕಲು ಸ್ತ್ರೀಯರು ಓಣಿಯ ಒಂದು ಪಕ್ಕದಲ್ಲಿನ ನಲ್ಲಿಯ ಸುತ್ತ ಕೊಡ ಹಿಡಕೊಂಡು ಪಟ್ಟಾಂಗ ಹೊಡೆಯುತ್ತಿದ್ದರು. [illegible] ದುಡಿಮೆ ಕೆಲಸ ಮಾಡಿದ ಗಂಡಸರು ಓಣಿಯಲ್ಲೇ ಕುಳಿತು ಬೀಡಿ ಸೇದುತ್ತಾ ಹರಟೆಯಲ್ಲಿ ಮಗ್ನರಾಗಿದ್ದರು.

ಶಿವನ್ ಈ ಲೋಕದೆಡೆಗೆ ಗಮನವೀಯದೆ, ಓಣಿಯಲ್ಲಿ ಮುಂದೆ ಸಾಗಿದನು. ಅವನ ಮನಸ್ಸು ಕಾತರದಿಂದ ಕಂಗಾಲಾಗಿತ್ತು. ಕೈ-ಕಾಲುಗಳು ನಡುಗುತ್ತಿದ್ದವು. ಕಣ್ಣುಗಳಲ್ಲಿ ನೀರ ಪರೆ ತುಂಬಿ ದೃಷ್ಟಿ ಮಂದವಾಗುತ್ತಿತ್ತು.

'ಕೊಲೆ ! ಕೊಲೆ !!'--- ಅವನು ತನ್ನಲ್ಲೇ ನುಡಿದುಕೊಂಡನು. 'ಆಭರಣಕ್ಕಾಗಿ ಸಣ್ಣ ಹುಡುಗಿಯನ್ನು ಸಮುದ್ರಕ್ಕೆ ತಳ್ಳಿ ಬಿಡುವದು ! ಅದೂ ತನ್ನನ್ನು ಸಲಹುವ ಮುನಿಸ್ವಾಮಿ !!....'

ಹೃದಯ ವೀಣೆ ಭೀಕರ ನಿನಾದವನ್ನೆಬ್ಬಿಸಿತು. ಪ್ರಳಯ ಕಾಲದ ಮೇಘದಂತೆ ಗರ್ಜಿಸಿತು.

ಈ ಮಾನಸಿಕ ಹೋರಾಟದಿಂದ ಗಾಸಿಗೊಂಡು, ಶಿವನ್ ಗುಡಿ ಸಲಿಗೆ ಬಂದು, ಬಳಲಿ ಬಿದ್ದುಕೊಂಡನು ಅದನ್ನು ಕಂಡು ಅವನ ಸಾಕುತಾಯಿ ಕೇಳಿದಳು:

"ಏನಾಗುತ್ತದೆ ನಿನಗೆ ಶಿವನ್ ?"

"ಏನೂ ಇಲ್ಲ.... ಏನೂ ಆಗುತ್ತಿಲ್ಲ ! .." ಶಿವನ್ ಕಣ್ಣು ಮುಚ್ಚಿ ಮಲಗಿಕೊಂಡನು.

ಕತ್ತಲು ಕವಿಯಿತು. ರಾತ್ರಿಯಾಯಿತು ಮುನಿಸ್ವಾಮಿ ಗುಡಿ ಸಲೊಳಗೆ ಬಂದನು. ಶಿವನ ಮೈ ಜುಮ್ಮೆಂದಿತು !

"ಬೇಗ ಬಡಿಸು. ನನಗೆ ಇಸ್ಪೇಟು ಆಡಲಿಕ್ಕೆ ಹೋಗಲಿಕ್ಕಿದೆ...." ಮುನಿಸ್ವಾಮಿ ಹೆಂಡತಿಗೆ ಆಜ್ಞಾಪಿಸಿದ.

"ಗಂಜಿ ಬೇಯುತ್ತದಷ್ಟೆ...." ಅವಳಂದಳು.

"ಬೇಯುತ್ತದಷ್ಟೆ ! ಬೇಯುತ್ತದಷ್ಟೇ !.... ಯಾವಾಗಲೂ ಹೀಗೇ ನಿನ್ನದು. ಕಾಲಕಾಲಕ್ಕೆ ಕೆಲಸವಾಗುವಂತಿಲ್ಲ !...." ಮುನಿ ಸ್ವಾಮಿ ಕೆರಳಿ ನುಡಿದ. ಮೇಲೆ ಕೆಳಗೆ ನಡೆದ.

ಅವನ ಮಾತಿನಲ್ಲಿ ಅವಸರವಿತ್ತು. ಅವನ ನಡಿಗೆಯಲ್ಲಿ ಅಸ್ಥಿರತೆ ಯಿತ್ತು. ಅವನ ಮುಖದಲ್ಲಿ ಉದ್ವೇಗವಿತ್ತು. ಶಿವನಿಗೆ ಇವೆಲ್ಲದರ ಅರ್ಥವೂ ತತ್‌ಕ್ಷಣ ಹೊಳೆಯಿತು. ಅವನ ಹೊಟ್ಟೆಗೆ ಬೆಂಕಿ ಬಿದ್ದಂತಾ ಯಿತು.

ಗಂಜಿ ಬೆಂದಾಗ ಇಬ್ಬರೂ ಒಟ್ಟಿಗೆ ಉಂಡರು. ಬಿಸಿ ಗಂಜಿಯನ್ನು ಅವಸರದಿಂದ ಉಂಡು, ಗಂಟಲು ಸುಟ್ಟುಕೊಂಡು ಮುನಿಸ್ವಾಮಿ ಹೆಂಡತಿ ಯನ್ನು ಬೈದ. ಬೈದು ಕೈ ತೊಳೆದು ಹೊರಟು ಹೋದ.

ಶಿವನ ಮೈ ನಡುಗಿತು !

ಅವನು ಊಟ ತೀರಿಸಿ ಮಲಗಿಕೊಂಡನು. ಮುನಿಸ್ವಾಮಿಯ ಹೆಂಡತಿಯೂ ಗುಣುಗುಟ್ಟುತ್ತಾ ಉಂಡು ಪಾತ್ರೆಗಳನ್ನೆಲ್ಲ ತೊಳೆದು, ದೀಪ ನಂದಿಸಿ ಮಲಗಿಕೊಂಡಳು. ಶಿವನಿಗೆ ಮಾತ್ರ ನಿದ್ದೆ ಬಾರದು. ನಿದ್ರೆ ಬಾರದು ಮಾತ್ರವಲ್ಲ, ಮಲಗಿಕೊಳ್ಳಲೇ ಅವನಿಂದಾಗಲಿಲ್ಲ. ಮಲ

ಗಿದ ಚಾಪೆ ಮುಳ್ಳಿನ ಚಾಪೆಯಂತೆಸಿಸಿತು. ಶಿವನ್ ಎದ್ದು ಕುಳಿತನು. ಕುಳಿತುಕೊಳ್ಳಲೂ ಅವನಿಂದಾಗಲಿಲ್ಲ. ಪುನಃ ಒರಗಿಕೊಂಡನು. ಅತ್ತಿತ್ತ ಹೊರಳಾಡಿದನು.

ತಾಯಿ ಒರಗಿದ್ದಳು. ಗೊರಕೆ ಹೊಡೆಯುತ್ತಿದ್ದಳು. ಗುಡಿಸಲೊಳಗಿಡೀ ಗಾಢ ಕತ್ತಲೆ ತುಂಬಿತ್ತು. ಹೊರಗೆ ಕೂಡ ಅಷ್ಟು ಕತ್ತಲೆಯಿದ್ದಿರಬೇಕು. 'ಅಂತಹದೊಂದು ಕರಾಳ ಕೃತ್ಯ ಈ ಕೊಂಪೆಯಲ್ಲಿ ಈಗ ನಡೆಯಲಿದೆ.' ಶಿವನ್ ಮಲಗದಾದ. ಚಿಕ್ಕವನಾದರೂ ಧೈರ್ಯದಿಂದ ಎದ್ದು ನಿಂತನು. ಮುನಿಸ್ವಾಮಿಯ ಹೆಂಡತಿ ಮಲಗುವಾಗ ತಲೆಬುಡದಲ್ಲಿ ಚೂರಿಯನ್ನಿಟ್ಟುಕೊಳ್ಳುತ್ತಿದ್ದಳು; ಭೂತ ಪ್ರೇತಗಳು ಸಮೀಪಕ್ಕೆ ಬಾರವಂತೆ! ಆ ಚೂರಿಯನ್ನು ಹುಡುಕಿ ಕೈಯಲ್ಲಿ ಹಿಡಕೊಂಡು ಬಾಗಿಲನ್ನು ಓರೆ ಮಾಡಿ ಶಿವನ್ ಓಣಿಗಿಳಿದನು.

ರಾತ್ರಿ ಭಯಂಕರವಾಗಿತ್ತು. ದೂರದೂರದಲ್ಲಿ ನೆಟ್ಟ ದೀಪಸ್ತಂಭಗಳ ಕ್ಷೀಣ ಬೆಳಕು ಮಸುಕು ಮಸಕಾಗಿ ಕೊಂಪೆಯನ್ನು ಬೆಳಗಿಸಿತ್ತು. ತುಂಬು ಮೌನ ಆದನ್ನಾಳುತ್ತಿತ್ತು. ಒಬ್ಬಿಬ್ಬರು ಓಣಿಯಲ್ಲಿ ಅತ್ತಿತ್ತ ಸಂಚರಿಸುತ್ತಿದ್ದರು ಮಾತ್ರ. ಅಲ್ಲಲ್ಲಿ ಒಂದೊಂದು ಗುಡಿಸಲೊಳಗಿನ ಮಾತುಕತೆಯ ಅಸ್ಪಷ್ಟ ದನಿಯೂ ಕೇಳಿಸುತ್ತಿತ್ತು. ಶಿವನ್ ಓಣಿಯಲ್ಲೀ ಮುಂದೆ ಸಾಗಿದನು. ಮುಂದೆ ಸಾಗಿ, ಕಣ್ಣನ ಗುಡಿಸಲಿಗೆ ತಿರುಗುವ ಸಂದಿನಲ್ಲಿ ಮುನ್ನಡೆದನು.

ಗುಡಿಸಲೆದುರಿನ ಚಿಕ್ಕ ಅಂಗಳದಲ್ಲಿ ಮಿಣಮಿಣನೆ ಉರಿಯುವ ದೀಪದೆದುರು ನಾಲ್ವರು ಇಸ್ಪೀಟು ಆಡುತ್ತಿದ್ದರು. ಗುಡಿಸಲ ಬಾಗಿಲಲ್ಲಿ ತೂಕಡಿಸುತ್ತಾ ಕಣ್ಣ ಕುಳಿತಿದ್ದನು. ಶಿವನ್ ಸಂದಿನಲ್ಲಿ ನೆರಳಲ್ಲಿ ಅಡಗಿ ನಿಂತು ನೋಡಿದನು. ಅವರು ಹುಡುಗಿಯನ್ನು ತಂದಿದಾರೋ, ಗುಡಿಸಲ ಒಳಗೆ ಇಟ್ಟಿದಾರೋ, ಅಲ್ಲ ಸಮುದ್ರಕ್ಕೆ ಬಿಸಾಡಿಯೂ ಆಯಿತೋ–ಎಂದು ಶಿವನಿಗೊಂದೂ ತಿಳಿಯದು.

ಆದರೂ ಸದ್ದು ಮಾಡದೆ, ಕತ್ತಲಲ್ಲೀ ಅವನು ಗುಡಿಸಲ ಹಿಂಬದಿಗೆ ಬಂದನು.

ಗುಡಿಸಲು ಮಣ್ಣಿನ ಗೋಡೆಯುದ್ದಾಗಿರಲಿಲ್ಲ. ತೆಂಗಿನ ಗರಿಗಳನ್ನು ಹೆಣೆದು ಅವನ್ನು ಗೋಡೆಯಂತೆ ಅಡ್ಡವಾಗಿ ಕಟ್ಟಿದ್ದರು. ಮಳೆ ನೀರು

ಒಡ್ಡಿ, ಬಿಸಿಲು ಹೊಡೆದು, ತೆಂಗಿನ ಗರಿಗಳ ತಟ್ಟಿ ಕೆಳಗಿನ ಭಾಗದಲ್ಲಿ ಗೆದ್ದಲು ಹಿಡಿದು ನಾಶವಾಗಿ ಹೋಗಿತ್ತು.

ಶಿವನ್ ಆ ಭಾಗದಿಂದ ಗುಡಿಸಲೊಳಗೆ ನುಗ್ಗಿದನು. ಎದುರಿನ ಬಾಗಿಲು ಅರೆ ತೆರೆದು, ಮಂದವಾದ ಪ್ರಕಾಶ ಗುಡಿಸಲೊಳಗೆ ತುಂಬಿತ್ತು. ಶಿವನ್ ಸುತ್ತಲೂ ದೃಷ್ಟಿ ಹರಿಸಿದನು. ಭಯ, ಕಾತರ, ಆತುರಗಳಿಂದ ಅವನೆದೆ ಹೊಡೆದುಕೊಳ್ಳುವ ಸದ್ದು ಅವನಿಗೇ ಕೇಳಿಸುತ್ತಿತ್ತು. ಶಿವನ್ ಸುತ್ತಲೂ ನೋಡಿದನು.

ತನ್ನ ಕಾಲ ಬುಡದಲ್ಲೇ ಹುಡುಗಿಯೊಬ್ಬಳು ನಿಶ್ಚಲವಾಗಿ ಬಿದ್ದುಕೊಂಡಿರುವುದು ಕಡೆಗೆ ಕಾಣಿಸಿತವನಿಗೆ! ಮೈ ಜುಮ್ಮೆಂದಿತು!

ಹುಡುಗಿ ಅವನಷ್ಟು ದೊಡ್ಡದಾಗಿರಲಿಲ್ಲ. ಕಣ್ಣನ ಪ್ರಾಯವಾದೀತಷ್ಟೆ! ಅವಳ ಕೈಕಾಲುಗಳನ್ನು ಹಗ್ಗದಿಂದ ಬಿಗಿದಿದ್ದರು. ಬಾಯಿಯನ್ನು ವಸ್ತ್ರದಿಂದ ಬಿಗಿದಿದ್ದರು! ಕೊಂಪೆಯವರೆಲ್ಲರೂ ನಿದ್ರಿಸುವ ತನಕ ಕೊಲೆಗಾರರು ಇಸ್ಪೀಟಿನ ನಾಟಕ ಹೂಡಿದ್ದರು!

ಶಿವನ್ ವಿಳಂಬ ಮಾಡುವ ಹಾಗಿರಲಿಲ್ಲ. ನಿಃಶಬ್ದವಾಗಿ ಅವಳ ಕಾಲಿನ ಹಗ್ಗವನ್ನು ತುಂಡು ಮಾಡಿದನು. ಕೈಗಳ ಕಟ್ಟನ್ನೂ ಬಿಡಿಸಿದನು. 'ನನ್ನ ಹಿಂದೆ ಬಾ' ಎಂದು ಸಂಜ್ಞೆಯಿಂದ ಸೂಚಿಸಿದನು. ಇಬ್ಬರೂ ನೆಲದ ಮೇಲೆ ಹರೆದು, ಗುಡಿಸಲ ಹೊರಬಿದ್ದರು.

ದೀಪಸ್ತಂಭಗಳ ದೀಪಗಳ ಬೆಳಕನ್ನು ತಪ್ಪಿಸಿಕೊಂಡು ಇಬ್ಬರೂ ಓಡಿದರು. ಶಿವನ್ ಉಸಿರೆತ್ತಲಿಲ್ಲ. ಹುಡುಗಿ ಮಾತನಾಡುವಂತಿರಲಿಲ್ಲ. ಓಣಿಯಲ್ಲೇ ಓಡಿ, ತನ್ನ ಗುಡಿಸಲು ದಾಟಿ, ಕರಿಬೇವಿನ ಮರವನ್ನು ಹಾದು, ಶಿವನ್ ಗೋಡೆಯನ್ನೇರಿದನು. ಹುಡುಗಿಯ ಕೈ ಹಿಡಿದೆಳೆದು ಅವಳನ್ನು ಮೇಲೇರಿಸಿ, ರಸ್ತೆಗೆ ಹಾರಿದನು. ಹುಡುಗಿಯೂ ಹಾರಿದಳು.

ಅವಳ ಬಾಯಿಯನ್ನು ಬಿಗಿದ ವಸ್ತ್ರವನ್ನು ಬಿಚ್ಚಿದನು ಶಿವನ್. ಅವಳು ಬಿಕ್ಕಿ ಅಳತೊಡಗಿದಳು. ಭಯದಿಂದ ನಿರ್ಬಲಳಾದ ಅವಳು ಶಿವನ ಎದೆಯ ಮೇಲೆ ಬಿದ್ದು ಬಿಟ್ಟಳು.

“ಅಳಬೇಡ! ಅಳಬೇಡ!.... ನಿನ್ನನ್ನೀಗ ಬಂದು ಹಿಡಿದಾರು! ನಿನ್ನ ಮನೆಯೆಲ್ಲಿ ಹೇಳು....” ಶಿವನ್ ಕಾತರದಿಂದ ಪಿಸುಗುಟ್ಟಿದನು.

“ಅಕೋ, ಆ ಮನೆಯೇ....” ರಸ್ತೆಯಾಚೆಗಿನ ಬಂಗಲೆಯನ್ನು

ತೋರಿಸಿದಳು. ಶಿವನ ಹುಬ್ಬುಗಳು ಕ್ಷಣದಲ್ಲಿ ಮೇಲೇರಿದುವು. ಬಾಯಿಯು ಗಾಬರಿಯಿಂದ ತೆರೆದುಕೊಂಡಿತು. ಅವಳ ಭುಜವನ್ನು ಹಿಡಿದು ಮುಂದೂಡುತ್ತಾ ಹೇಳಿದ:

“ಓಡು! ನಿನ್ನ ಮನೆಗೋಡು!”

“ಅಯ್ಯೋ! ನನಗೆ ಕಾಲೇ ಬಾರದು!....” ಹುಡುಗಿ ಬಿಕ್ಕಳಿಸಿದಳು.

“ಓಡಿ ಹೋಗು! ಇಲ್ಲವಾದರೆ........” ರಟ್ಟೆ ಹಿಡಿದು ಶಿವನ್ ಅವಳನ್ನು ಮುಂದೂಡಿದ.

ನೀರು ತುಂಬಿದ ಕಣ್ಣುಗಳನ್ನು, ಭಯದಿಂದ, ಆಯಾಸದಿಂದ ಶಿವನೆಡೆಗೆ ಹೊರಳಿಸಿದಳಾಕೆ. ಅವಳ ತುಟಿಗಳು ಥರಥರನೆ ಕಂಪಿಸುತ್ತಿದ್ದುವು. ಕೈಕಾಲು ನಡುಗುತ್ತಿದ್ದಿರಬೇಕು. ಆದರೂ ಕಾಲುಗಳನ್ನೆಳೆಯುತ್ತಾ ರಸ್ತೆ ದಾಟಿ, ಮನೆಯ ಹೆಬ್ಬಾಗಿಲ ಬಳಿ ನಡೆದಳು. ಅಳುತ್ತಾ ‘ಕಿರಣಸಿಂಗ! ಕಿರಣಸಿಂಗ’ ಎಂದು ಹುಡುಗಿ ಕೂಗಿದುದು ಶಿವನಿಗೆ ಕೇಳಿಸಿತು.

ರಭಸದಿಂದ ಗೋಡೆಯನ್ನೇರಿ, ನಾಗಾಲೋಟದಿಂದ ಮನೆಯನ್ನು ಸೇರಿ, ಶಿವನ್ ಮಲಗಿಕೊಂಡನು. ನಿದ್ರೆ ಮಾತ್ರ ಬರಲಿಲ್ಲ.

---

## ೪

ಬೆಳಕು ಇನ್ನೂ ಹರಿದಿರಲಿಲ್ಲ. ಆದರೆ ಕೊಂಪೆಯ ನಿವಾಸಿಗಳು ಅದಾಗಲೇ ಎಚ್ಚತ್ತಿದ್ದರು. ಓಣಿಯಲ್ಲಿ ಒಬ್ಬಿಬ್ಬರು ಅತ್ತಿತ್ತ ಸಂಚರಿಸತೊಡಗಿದ್ದರು ಕೊಂಪೆ ತನ್ನ ನಿದ್ದೆಯಿಂದೆಚ್ಚತ್ತು ಮೆಲ್ಲಮೆಲ್ಲನೆ ಚೇತರಿಸಿಕೊಳ್ಳುವಂತಿತ್ತು. ಕತ್ತಲು ಕರಗಿ ಬೆಳಕು ಮೆಲ್ಲಮೆಲ್ಲನೆ ಪಸರಿಸಿಕೊಳ್ಳುವಂತಿತ್ತು.

ಆ ಸಮಯದಲ್ಲಿ ಎರಡು ಪೋಲೀಸ್ ವ್ಯಾನುಗಳು ಬಂದು ಕೊಂಪೆಯ ಶಾಂತಿಯನ್ನೆಲ್ಲ ಕದಡಿಸಿದುವು. ಹತ್ತು ಮಂದಿ ಪೋಲೀಸರು ವ್ಯಾನಿ

ನಿಂದಿಳಿದು ಕೊಂಪೆಯ ಪ್ರತಿ ಗುಡಿಸಲನ್ನು ಪ್ರವೇಶಿಸಿ ಪ್ರತಿಯೊಬ್ಬ ಗಂಡಸು ಮತ್ತು ಪ್ರತಿ ಎಂಟು ವರ್ಷದ ಮೇಲಿನ ಹುಡುಗರನ್ನು ಬಂಧಿಸಿದರು. ಯಾರೊಬ್ಬರಿಗೂ ಏತಕ್ಕಾಗಿ ಎಂದು ತಿಳಿಯಲಿಲ್ಲ. ಎಲ್ಲರೂ ಪೋಲೀಸರನ್ನು ಶಪಿಸುತ್ತಾ ವ್ಯಾನಿಗೇರಿದರು. ಕೊಂಪೆಯ ಹೆಂಗುಸರಂತೂ ಚೀರಾಡುತ್ತಾ ವ್ಯಾನುಗಳನ್ನು ಮುತ್ತಿ ಬಿಟ್ಟರು. ಮಕ್ಕಳೆಲ್ಲ ಬಿಕ್ಕಿ ಅಳಹತ್ತಿದುವು. ಗಂಡುಸರಲ್ಲಿ ಕೆಲವರು ನಿರಪರಾಧಿಗಳಾದ ತಮ್ಮನ್ನೇಕೆ ಒಯ್ಯುವರೆಂದು ಬಾಯಿಗೆ ಬಂದಂತೆ ಒದರಾಡಹತ್ತಿದರು.

ಕೊಂಪೆಯಲ್ಲಿನ ಗದ್ದಲ ಕೇಳಿ, ರಸ್ತೆಯಲ್ಲಿ ಹೋಗುವ ಜನರೂ ಬಂದರು. ಅಂತೂ ಕೊಂಪೆಯನ್ನೆಲ್ಲ ಬಾಚಿ, ಗಂಡುಸರನ್ನೂ ಮಕ್ಕಳನ್ನೂ ಬಂಧಿಸಿ, ಪೋಲೀಸರು ಅವರನ್ನು ಸ್ಟೇಷನ್ನಿಗೊಯ್ದರು.

ಸ್ಟೇಷನಿನ ಚಾವಡಿಯಲ್ಲಿ ಹತ್ತು ಗಂಟೆಗೆ ಸರಿಯಾಗಿ ಇವರೆಲ್ಲರೂ ಸಾಲಾಗಿ ನಿಲ್ಲಿಸಲ್ಪಟ್ಟರು. ಏಕೆಂದು ಅವರಿಗೇ ತಿಳಿಯದು. ಏನಾದರೂ ಕೊಲೆಯೋ ದರೋಡೆಯೋ ನಡೆದಿರಬಹುದೆಂದು ಎಲ್ಲರ ಊಹೆ. ಸಾಲಿನ ಒಂದು ತುದಿಯಿಂದ ಇನ್ಸಪೆಕ್ಟರರೂ ಒಬ್ಬಳು ಸುಮಾರು ಹತ್ತು ವರ್ಷದ ಬಾಲಕಿಯೂ ಕಾಣಸಿಕೊಂಡಾಗ, ಎಲ್ಲ ಕತ್ತುಗಳೂ ಆ ಕಡೆಗೆ ಕುತೂಹಲದಿಂದ ನೀಡಿಕೊಂಡುವು.

"ಇವರಲ್ಲಿ ಯಾರನ್ನೆಲ್ಲ ನಿನ್ನೆ ನೋಡಿದ್ದೆಯೋ ಅವರನ್ನು ತೋರಿಸು" ಇನ್ಸಪೆಕ್ಟರವರು ಬಾಲಕಿಗೆ ಹೇಳಿದರು.

"ಹೂಂ" ಎಂದು ತಲೆಯಲ್ಲಾಡಿಸಿ, ಪ್ರತಿಯೊಬ್ಬನನ್ನು ನೋಡುತ್ತಾ ಹುಡುಗಿ ಮುಂದೆ ಸರಿದಳು. ಇನ್ಸಪೆಕ್ಟರವರೂ ಅವಳ ಹಿಂದೆಯೇ ನಡೆದರು.

ಸಾಲಿನ ತುತ್ತ ತುದಿಯ ತನಕ ಬಂದು, ಹುಡುಗಿ ಅಲ್ಲಿಯೇ ನಿಂತು ಇನ್ಸಪೆಕ್ಟರವರ ಮುಖ ನೋಡಿದಳು.

"ಯಾರ ಗುರುತೂ ಸಿಗಲಿಲ್ಲಾ?" ಅವರು ಕೇಳಿದರು.

"ನಾ ನೋಡಿದವರು ಇಲ್ಲಿಲ್ಲ" ಹುಡುಗಿಯೆಂದಳು.

"ಇನ್ನೊಮ್ಮೆ ಸರಿಯಾಗಿ ನೋಡು" ಇನ್ಸಪೆಕ್ಟರರೆಂದರು.

ಹುಡುಗಿ ಮತ್ತೊಮ್ಮೆ ನೋಡಿದಳು.

"ಇಲ್ಲ, ಇಲ್ಲ. ಅವರಾರೂ-ಇಲ್ಲ...." ಅಂದಳು ಪುನಃ.

"ಈಚೆ ಬಾ.... ಇವರನ್ನು ನೋಡು" ಚಾಮುಡಿಯು ಇನ್ನೊಂದು ಬದಿಗೆ ಕರೆದೊಯ್ಯುತ್ತಾ ಇನ್ಸಪೆಕ್ಟರವರೆಂದರು. ಅಲ್ಲಿ ಇಪ್ಪತ್ತು ಮೂವತ್ತು ಬಾಲಕರು ಸಾಲಾಗಿ ನಿಂತುಕೊಂಡಿದ್ದರು.

ಹುಡುಗಿ ಒಬ್ಬೊಬ್ಬರನ್ನೇ ನೋಡುತ್ತ ಒಂದು ಕಡೆ ತಟ್ಟನೆ ನಿಂತಳು.

'ಏನು?' ಇನ್ಸಪೆಕ್ಟರರು ಆತುರದಿಂದ ಕೇಳಿದರು.

'ಇವನು!' ಅಂದಳು ಹುಡುಗಿ.

'ನಿನ್ನನ್ನು ಚಿಪ್ಪಿನಾಶೆ ತೋರಿಸಿ........'

'ಅಲ್ಲ....ಅಲ್ಲ.... ನನ್ನನ್ನು ಅವರ ಕೈಯಿಂದ ತಪ್ಪಿಸಿದವನು' ಹುಡುಗಿ ಹಿಗ್ಗಿನಿಂದ ಹೇಳಿದಳು.

'ಚಿಪ್ಪಿನಾಶೆ ತೋರಿಸಿದ ಹುಡುಗನಿದ್ದಾನೋ ನೋಡು' ಇನ್ಸಪೆಕ್ಟರವರಂದರು.

ಅವಳು ಹುಡುಗರನ್ನೆಲ್ಲ ಎರಡೆರಡು ಬಾರಿ ನೋಡಿದಳು. ನೋಡಿ 'ಇಲ್ಲ' ಅಂದಳು.

ಇನ್ಸಪೆಕ್ಟರವರು ಹುಡುಗಿಯೊಡನೆ ಅವಳು ತೋರಿಸಿದ ಶಿವನನ್ನು ಒಳಗೆ ಕರೆದೊಯ್ದರು. ಇತರ ಗಂಡಸರು ಮಕ್ಕಳೆಲ್ಲ ವ್ಯಾನಿನಲ್ಲಿ ತುಂಬಲ್ಪಟ್ಟು, ಕೊಂಪೆಗೆ ಸಾಗಿಸಲ್ಪಟ್ಟರು.

ಕೋಣೆಯೊಳಗೆ ಇನ್ಸಪೆಕ್ಟರವರು ಕೇಳಿದರು:

'ಈ ಹುಡುಗಿಯನ್ನು ನೀ ಮೊದಲು ನೋಡಿದ್ದೀಯಾ?'

ಶಿವನ್ ಹೌದೆಂದು ತಲೆಯಲ್ಲಾಡಿಸಿದನು.

'ಎಲ್ಲಿ?'

'ನಿನ್ನೆ ರಾತ್ರಿ........' ಶಿವನ್ ನಡೆದ ವಿಷಯವನ್ನೆಲ್ಲ ಹೇಳಿದನು.

'ನಿನ್ನ ಹೆಸರೇನು?'

'ಶಿವನ್'

'ತಂದೆಯ ಹೆಸರು?'

'ಪಚ್ಚೈ....'

ಮುನಿಸ್ವಾಮಿ ಮತ್ತು ಅವನ ಕೂಟದವರು ಪೋಲೀಸರ 'ನೋಟು ಬುಕ್ಕಿ'ನಲ್ಲಿ ಆಗಾಗ ಕಾಣಿಸಿ ಕೊಳ್ಳುವವರೇ! ಅದ್ದರಿಂದ ಪಟ್ಟಣದ

ಎಲ್ಲ ಉಪಸ್ಟೇಷನುಗಳಿಗೆ ಫೋನಿನ ಮೂಲಕ ಇನ್ಸ್‌ಪೆಕ್ಟರವರು ಸಮಾಚಾರ ತಿಳುಹಿಸಿದರು. ಕ್ಷಣದಲ್ಲಿ ಪಟ್ಟಣದ ಬೀದಿ ಬೀದಿಗಳಲ್ಲಿ ಪೋಲೀಸರು ಕಾಣಿಸಿಕೊಂಡರು.

'ನೀನು ಕೆಲವು ದಿನ [illegible] ಇರಬೇಕು' ಇನ್ಸ್‌ಪೆಕ್ಟರವರು ಹೇಳಿದರು.

ಶಿವನ್ ಸಮೀಪದ ಕೋಣೆಯಲ್ಲಿ ಕುಳ್ಳಿರಿಸಲ್ಪಟ್ಟನು. ತಿಂಡಿ ತೀರ್ಥಗಳೆಲ್ಲ ಅವನೆದುರು ಬಂದುವು. ಅವುಗಳಿಂದ ಅವನ ಹೊಟ್ಟೆಯೂ ತುಂಬಿತು.

ಸ್ವಲ್ಪ ಸಮಯದಲ್ಲಿ ಇನ್ಸ್‌ಪೆಕ್ಟರವರು ಮತ್ತು ಉತ್ತಮ ವೇಷ ಧರಿಸಿದ ಗೃಹಸ್ಥರೊಬ್ಬರು ತನ್ನೆಡೆಗೆ ಬರುವುದು ಶಿವನಿಗೆ ಕಾಣಿಸಿತು. ಅವನು ಎದ್ದು ನಿಂತನು. ತಾನು ಮುನಿಸ್ವಾಮಿಯೊಡನೆ ಹಜೆ ಗೋಡೆಯನ್ನೇರಿ ಕುಳಿತುಕೊಂಡಿರುವಾಗ, ಕಾರಿನಲ್ಲಿ ಕುಳಿತು ಎದುರಿನ ಬಂಗಲೆಯಿಂದ ಹೊರಬೀಳುವ ವ್ಯಕ್ತಿಯವರು ಎಂದು ಶಿವನಿಗೆ ಕೂಡಲೇ ತಿಳಿಯಿತು. 'ಶ್ರೀಮಂತರವರು ಬಡವರ ರಕ್ತ ಹೀರಿದ್ದಾರೆ. ಅವರನ್ನು ಇಡಗೊಡಬಾರದು' ಎಂದು ಬೀಡಿ ಸೇದುತ್ತ ಮುನಿಸ್ವಾಮಿ ಹಂಗಿಸಿದುದು ಶಿವನಿಗೆ ನೆನಪಾಯಿತು. ಹಂಗಿಸುತ್ತಿದ್ದ— ಯಾತಕ್ಕಾಗಿ?— ಕಳ್ಳತನಕ್ಕೆ! ತಾನು ಸುಲಿಯುವುದು ಸರಿ ಎಂದು ತೋರಿಸಿಕೊಳ್ಳುವುದಕ್ಕೆ!!........

ಶ್ರೀಮಂತ ಗೃಹಸ್ಥರು ಶಿವನ ಸಮೀಪಕ್ಕೆ ಬಂದು, ಆದರದಿಂದ ಅವನ ಭುಜವನ್ನು ತಟ್ಟುತ್ತ ಹೇಳಿದರು:

"ಶಿವನ್! ನೀನು ಬಹಳ ಉಪಕಾರ ಮಾಡಿದ್ದೀ! ....ಅದನ್ನು ನಾನು ಮರೆಯಲಾರೆನು...."

ಶಿವನ್ ಆ ಹೊಗಳಿಕೆಯಿಂದ ಲಜ್ಜಿತನಾದನು. ತಲೆ ಬಗ್ಗಿಸಿದನು.

"ಹುಡುಗ ಬಹು ಸಂಕೋಚದವನು!" ಇನ್ಸ್‌ಪೆಕ್ಟರರು ಅಂದರು.

"ಯೋಗ್ಯ ಹುಡುಗ! ಯೋಗ್ಯ ಹುಡುಗ!" ಅವರು ಪ್ರಶಂಸಿಸುತ್ತಾ ಇನ್ಸ್‌ಪೆಕ್ಟರವರೊಡನೆ ಹೊರಟು ಹೋದರು.

ಅದೇ ಸಂಜೆ, ಮುನಿಸ್ವಾಮಿ ಮತ್ತು ಕೂಟದವರು ಕೋಳ ಧರಿಸಿಕೊಂಡು ಬಂದರು. ಬಾಗಿದ ತಲೆಯ ಕಣ್ಣನೂ ಒಟ್ಟಿಗಿದ್ದ. ಅವನಿಗೇಕೋ

ಆಗ ರೋಮಾಂಚವಾಯಿತು. ಅವರನ್ನೆಲ್ಲ ಶಿವನನ್ನು ಕೂಡಿಸಿದ ಎದು ರಿನ ಕೋಣೆಯಲ್ಲೇ ಕೂಡಿಸಿದ್ದರು. ಆಗ ಶಿವನನ್ನು ಕಂಡ ಮುನಿ ಸ್ವಾಮಿ ಬಾಯಿಗೆ ಬಂದಂತೆ ಬೈದಿದ್ದನು. ಪೋಲೀಸರೇ ಅವನ ಕೆನ್ನೆ ಗೆರಡು ಬಿಗಿದು, ಅವನ ಬೊಬ್ಬೆಯನ್ನು ನಿಲ್ಲಿಸಿದರು.

---

೫

ಶಿವನ್ ಅತ್ತಿತ್ತ ನೋಡಿದನು.

ಇನ್ಸಪೆಕ್ಟರವರು ಅವನ ಸಮೀಪ ಬಂದು, ಬೆನ್ನು ತಟ್ಟುತ್ತ ಹೇಳಿ ದರು: 'ಎಲ್ಲ ಚೆನ್ನಾಗಿ ಮಾಡಿದೆ. ಇನ್ನು ನೀನು ಖುಷಿ ಕಂಡಲ್ಲಿಗೆ ಹೋಗಬಹುದು.'

'—ಖುಷಿ ಕಂಡಲ್ಲಿಗೆ ಹೋಗಬಹುದು!—' ಎಂಬ ನುಡಿಗಳು ಅವನ ಕಿವಿಗಳಲ್ಲಿ ಮತ್ತೆ ಮತ್ತೆ ಮೊರೆದಾಡಿದುವು. ಹೋಗಬಹುದು! ಆದರೆ ಎಲ್ಲಿಗೆ? ಪುನ: ಕೊಂಪೆಗೆ ಹೋಗಬೇಕೇ? ಯಾಕಾಗಿ? ತಾಯಿಯೆದುರಿಗೆ ತನ್ನ ಮುಖವನ್ನು ತೋರಿಸುವುದಾದರೂ ಹೇಗೆ?. . ಮುನಿಸ್ವಾಮಿ ಮತ್ತು ನಾಲ್ವರಿಗೆ ಎಂಟೆಂಟು ವರ್ಷಗಳಷ್ಟು ಶಿಕ್ಷೆ, ಕಣ್ಣ ನಿಗೆ ಜೈಲು ಶಾಲೆ! ಇದಕ್ಕೆಲ್ಲ ಕಾರಣ ಯಾರು? ತಾನೇ! ಕೊಂಪೆಗೇ ಪ್ರಿಯನಾದ ಮುನಿಸ್ವಾಮಿ ಮತ್ತಿತರರಿಗೆ ಗತಿ ತೋರಿಸಿದ ತನ್ನನ್ನು ಜನ ಉಳಿಯಗೊಡುವರೇ?

ಎಲ್ಲಿಗೆ ಹೋಗಬೇಕು? ಎಲ್ಲಿಗೆ ಹೋಗಬಹುದು! ಪುನ ಬೀದಿಯೇ ಗತಿ! ಪುನಃ ಅಲೆದಾಟವೇ ಗತಿ! ಪುನಃ ಉಪವಾಸ— ವನವಾಸ....

ಶಿವನಿಗೆ ದುಃಖ ಉಕ್ಕಿ ಬಂದಿತು. ಕಣ್ಣುಗಳು ಜಲಮಯವಾದುವು. ಬೆರಳುಗಳಿಂದ ಕಣ್ಣುಗಳನ್ನು ಒರಸಿಕೊಂಡನವನು. ನ್ಯಾಯಾಲಯದ ಅಗಲವಾದ ವರಾಂಡದಲ್ಲೇ ಮುನ್ನಡೆದನು. ಜನರು ಪಿಸುಗುಟ್ಟುತ್ತ ಅತ್ತಿಂದಿತ್ತ ಓಡಾಡುತ್ತಿದ್ದರು. ವಕೀಲರು ತಮ್ಮ ಕಕ್ಷಿಗಾರರಿಗೆ ಅವಸರ

ಅವಸರವಾಗಿ ಏನೇನೋ ಹೇಳಿಕೊಡುತ್ತಿದ್ದರು. ಅವಸರ, ಕಾತರ ಆ ವಾತಾವರಣದಲ್ಲೇ ತುಂಬಿಕೊಂಡಿತ್ತು.

ಆದರೆ ಅವನಿಗೇನು ಅವಸರ? ಮೆಲ್ಲನೆ ನ್ಯಾಯಾಲಯದ ಮೆಟ್ಟಿಲು ಗಳನ್ನಿಳಿದು ಅಂಗಳಕ್ಕಿಳಿದನು. ಅಂಗಳದಲ್ಲಿ ನೆಟ್ಟ ಮರಗಳು ತಂಪಾದ ನೆಳಲನ್ನಿತ್ತಿದ್ದವು. ಅಲ್ಲೇ ಒಂದು ಮರದ ಬುಡದಲ್ಲಿ ಚಿಂತಾ ಕುಲನಾಗಿ ಶಿವನ್ ಕುಳಿತುಕೊಂಡನು. ಹಿಂದಿನ ದಿನಗಳೆಲ್ಲ ಅವನ ಜಲಮಯವಾದ ಕಣ್ಣುಗಳೆದುರು ಸುಳಿದು ಹೋದುವು.

“ಯಾಕೆ ಹುಡುಗ, ಕಣ್ಣಲ್ಲೇಕೆ ನೀರು?” ಪ್ರಶ್ನೆಯಿಂದ ಶಿವನ ಧ್ಯಾನಕ್ಕೆ ಭಂಗ ಬಂತು.

“ಆಂ!” ಎನ್ನುತ್ತ ಕಣ್ಣುಗಳನ್ನು ಒರಸಿಕೊಂಡು ನೋಡಿದನು ಮಧ್ಯಮ ವಯಸ್ಸಿನ ಗಂಡಸರೊಬ್ಬರು ಕನಿಕರದಿಂದ ಎದುರು ನಿಂತು ಕೊಂಡಿದ್ದರು

“ನಿನಗೆ ಬೇಕಾದ್ದವರಿಗೇ ಶಿಕ್ಷೆಯಾಯಿತೇ?” ದಯಾಳು ಗಳು ಕೇಳಿದರು.

“ಇಲ್ಲ” ಎಂದು ತಲೆಯಲ್ಲಾಡಿಸಿದ ಶಿವನ್.

“ಮತ್ತೆ?” ಅವರು ಪ್ರಶ್ನಿಸಿದರು.

ಆಗಲೇ ನಾಲ್ಕಾರು ಜನ ಅವನ ಸುತ್ತ ಕಲೆತರು. ‘ದಯಾಳು’ ಗಳ ಸಂಖ್ಯೆ ಹೆಚ್ಚಾಯಿತು. ಶಿವನ್ ಗಾಬರಿಗೊಂಡು ಅಲ್ಲಿಂದೋಡಿದ. ನ್ಯಾಯಾಲಯದ ಮಹಾದ್ವಾರದ ಬಳಿಗೋಡಿದನು. ಅಲ್ಲೇ ನಿಂತು ಎದುರಿನ ವಿಶಾಲವಾದ ರಸ್ತೆಯನ್ನು ನೋಡಿದನು.

ಉರಿಬಿಸಿಲು ಕಣ್ಣುಗಳನ್ನು ಕುರುಡು ಕಟ್ಟಿಸುವಂತೆ ಹೊಡೆಯು ತ್ತಿತ್ತು. ಕಾಲಡಿಯ ಸಿಮೆಂಟು ಪ್ರಖರವಾಗಿ ಉರಿಯತೊಡಗಿತ್ತು. ಕಾಲುಗಳನ್ನು ನೆಲದ ಮೇಲೆ ಇಡುವ ಹಾಗೂ ಇರಲಿಲ್ಲ. ಅವನೆದುರು ರಸ್ತೆಯ ಪಕ್ಕದಲ್ಲಿ ಜನರು ಮೇಲೆ ಕೆಳಗೆ ಅವಸರದಿಂದ ಚಲಿಸುತ್ತಿದ್ದರು. ಪ್ರತಿಯೊಬ್ಬರ ಚಲನೆಯಲ್ಲೂ ಒಂದು ಗುರಿಯುತ್ತು; ಉದ್ದೇಶವಿತ್ತು. ಆದರೆ........

ರಸ್ತೆಯ ಮಧ್ಯದಲ್ಲಿ ಟ್ರಾಂ ಬಂಡಿಗಳು ಭೀಷಣ ಸದ್ದೆಬ್ಬಿಸುತ್ತಾ ಸುಡು ಬಿಸಿಲನ್ನು ಗಣನೆಗೆ ತಾರದಂತೆ ಓಡುತ್ತಿದ್ದುವು. ಇತರ ವಾಹನ

ಗಳು ರಭಸದಿಂದ ಓಡಾಡುತ್ತಿದ್ದುವು. ಕೆಲವು ಜನರು ರಸ್ತೆಯನ್ನು ಅಡ್ಡವಾಗಿ ದಾಟುತ್ತಾ ಎದುರಿನಿಂದ ಬಂದ ವಾಹನಗಳನ್ನು ಕಂಡು ಕ ್ಷಿಚಕ್ಕಿಯಾಗಿ ನಿಂತುದನ್ನೂ ಶಿವನ್ ಶೂನ್ಯ ದೃಷ್ಟಿಯಿಂದ ನೋಡಿದ

ನೋಡಿ ನಿಟ್ಟುಸಿರು ಬಿಟ್ಟನು. ನಿಟ್ಟುಸಿರು ಬಿಟ್ಟಾಗ್ಗೆ, ಪುನಃ ಭವಿಷ್ಯತ್ತಿನ ಪ್ರಶ್ನೆ ವಿರಾಟ ರೂಪ ಧರಿಸಿ ಅವನೆದುರು ನಿಂತು, ಅವನನ್ನು ಕಾಡಿಸಿತು. ಏನು ಮಾಡಲಿ? ಎಲ್ಲಿಗೆ ಹೋಗಲಿ! ಬೇಡಿದರೆ ಏನೇನೂ ಸಿಗದು.... ಏನೇನೂ ಸಿಗದು....

ತನ್ನಿಂದ ತುಸು ದೂರದಲ್ಲೇ ಒಬ್ಬಳು ನಿರ್ಗತಿಕೆ ನಿಂತಿರುವುದು ಶಿವನಿಗೆ ಕಾಣಿಸಿತು. ಒಂದು ಹರಕು ಸೀರೆ ಅವಳ ಮೈಯನ್ನು ಮುಚ್ಚಿತ್ತಷ್ಟೆ. ಶಿವನ್ ಅದನ್ನು ಕಂಡು ತನ್ನನ್ನೇ ನೋಡಿಕೊಂಡ. ಅದೇ ಪುಣ್ಯ! ತಾನು ಅವಳಷ್ಟು ದುಸ್ಥಿತಿಯಲ್ಲಿಲ್ಲ ಎಂದುಕೊಂಡನವನು. ಮುನಿಸ್ವಾಮಿ ಕೊಟ್ಟ ಒಂದು ಇಜಾರು, ಒಂದು ಅಂಗಿ ಇದೆ ಎಂದು ನೆನೆದುಕೊಂಡನು. ಇನ್ನೊಂದು ಕ್ಷಣದಲ್ಲಿ, ಆ ಇಜಾರು ಮತ್ತು ಅಂಗಿ ಎಲ್ಲಿಂದ ಕದ್ದು ತಂದುದೋ ಎಂಬ ಯೋಚನೆ ಮನದಲ್ಲಿ ಮೊಳೆದಾಗ ಶಿವನಿಗೆ ಎಲ್ಲಿಲ್ಲದ ಸಂಕಟವಾಯಿತು.

ಆ ನಿರ್ಗತಿಕ ಬಡವೆಯ ಕಾಲಬುಡದಲ್ಲಿ, ಒಂದು ಬಟ್ಟೆಯ ಚೂರಿನ ಮೇಲೆ ಒಂದು ಚಿಕ್ಕ ಮಗು ಅಂಗಾತ ಮಲಗಿತ್ತು. ಹುಟ್ಟಿ ಹತ್ತು ದಿನಗಳೂ ಆಗಿರಲಿಕ್ಕಿಲ್ಲ. ಗೇಣುದ್ದದ ಮಗು. ಎಲುಬು ಮತ್ತು ಚರ್ಮದಲ್ಲಿ ಆ ಜೀವ ನಿಲ್ಲಲಾರದೆ ತೊಳಲಾಡುವಂತಿತ್ತು. ಅದನ್ನು ಕಂಡು ಶಿವನೆದೆ ಜುಮ್ ಎಂದಿತು. ಬಡವೆ "ಮಗುವಿಗೆ ಹಾಲು ಕುಡಿಸಲು ಕಾಸು ಕೊಡೀ...." ಎಂದು ಬೇಡುತ್ತಿದ್ದಳು. ಆದರೆ ಯಾರೊಬ್ಬರೂ ಅವಳ ಮೇಲೆ ಕರುಣೆದೋರುತ್ತಿರಲಿಲ್ಲ. 'ಅವಳಿಗೆ ಜನ ಹಣ ಕೊಡುವುದಿಲ್ಲ. ಮತ್ತೆ ನನಗೆ ಕೊಟ್ಟಾರೇ?' ಎಂದು ಶಿವನ್ ಚಿಂತಿಸಿದ.

'ಪೋಂ....ಪೋಂ' ಎಂಬ ಹಾರ್ನಿನ ಶಬ್ದ ಹಠಾತ್ತಾಗಿ ಹಿಂದಿನಿಂದ ಕೇಳಿಸಿತು. ಶಿವನ್ ಹೌಹಾರಿ ಪಕ್ಕಕ್ಕೆ ಹಾರಿದನು.

"ಹೋಗೋ ಪೋಲಿ! ದ್ವಾರದ ನಡುವಿನಲ್ಲೇ ನಿಂತಿದ್ದೀಯಲ್ಲೋ! ಸಾಯಬೇಕೆಂದಿದೆಯೇನೋ ನಿಂಗೆ? ಮನೆಯಲ್ಲಿ ಹೇಳಿ ಬಾ!...." ಕಾರಿನ ಡ್ರಾಯವರ್ ಜರೆದು ಕಾರನ್ನು ಮುಂದೋಡಿಸಿದನು.

'' ಅಪ್ಪಾ, ಅಗೋ ಅವನೇ !.... ಅವನೇ ! '' ಕಾರಿನೊಳಗಿಂದ ಆತುರದ ಧ್ವನಿ ಕೇಳಿಸಿತು.

ಕಾರು ತಟ್ಟನೆ ನಿಂತುಕೊಂಡಿತು. ಕಾರಿನಿಂದ ಒಬ್ಬಳು ಹುಡುಗಿ ...

ಶಿವನ್ ನಿಂತಲ್ಲಿಯೇ ನಿಂತು ನೋಡಿದನು. ಹೌದು! ಅದೇ ಹುಡುಗಿ !....ಕಾರಿನಿಂದಿಳಿದಳು ಹುಡುಗಿಯ ಹಿಂದೆ, ತನ್ನನ್ನು ಸ್ಟೇಷನನಲ್ಲಿ ನೋಡಿದ ಶ್ರೀಮಂತ ಗೃಹಸ್ಥರೂ ಇಳಿದುದು ಶಿವನಿಗೆ ಕಾಣಿಸಿತು.

ಅವರು ಶಿವನನ್ನು ಸಂಜ್ಞೆಯಿಂದ ಹತ್ತಿರಕ್ಕೆ ಕರೆದರು. ಶಿವನ್ ಅವರೆಡೆಗೆ ನಡೆದನು.

'' ನೀನಿನ್ನು ಏನು ಮಾಡಬೇಕೆಂದಿರುವೆ ಶಿವನ್ ? '' ಅವರು ಕೇಳಿದರು.

'' ನನಗೆ ಗೊತ್ತಿಲ್ಲ !....'' ಅಂದನು ಶಿವನ್.

'' ಗೊತ್ತಿಲ್ಲ ಅಂದರೆ ? '' ಮರುಸವಾಲು ಬಂತು.

'' ನನಗೆ ಗೊತ್ತಿಲ್ಲ !....'' ತಡವರಿಸಿದನು ಶಿವನ್.

'' ನನ್ನೊಟ್ಟಿಗೆ ಬರುತ್ತೀಯಾ ?....''

ಶಿವನ್ ತಲೆಯೆತ್ತಿ ನೋಡಿದನು. ಅವರು ಹೇಳಿದರು.

'' ಹೌದು. ಸುಮ್ಮನೆ ಬೀದಿ ಬೀದಿ ಅಲೆದು ಏನು ಮಾಡುವಿ ನೀನು ? ನಮ್ಮ ಮನೆಗೆ ಬಾ. ಏನಾದರೂ ಕೆಲಸ ಮಾಡಿಕೊಂಡಿರು. ನಿನಗೆ ಊಟ ಸಂಬಳ ಎಲ್ಲಾ ಕೊಡುತ್ತೇನೆ....''

ಶಿವನು ತಲೆ ತಗ್ಗಿಸಿದನು. ಮಾತಾಡಲಿಲ್ಲ.

'' ಏನು ಬರಲಾರೆಯಾ ? '' ಕಳವಳದ ಪ್ರಶ್ನೆ ಕೇಳಿ ಬಂತು. ಕೇಳಿದುದು ಆ ಹುಡುಗಿ. ಶಿವನ್ ತಲೆ ನೆಗ್ಗಿ ನೋಡಿದನು. ಹುಡುಗಿಯ ನೋಟದಲ್ಲಿ ಯಾಚನೆಯ ದೈನ್ಯತೆಯಿದ್ದಿತು.

'' ಬರುವೆನು '' ಎಂಬಂತೆ ಶಿವನ್ ತಲೆಯಲ್ಲಾಡಿಸಿದನು.

'' ಹಾಗಾದರೆ ಕುಳಿತುಕೋ ಕಾರಿನೊಳಗೆ ! '' ಅಂದರು ಹುಡುಗಿಯ ತಂದೆ. ಡ್ರಾಯವರನ ಪಕ್ಕದಲ್ಲೇ ಶಿವನ್ ಕುಳಿತುಕೊಂಡನು. ಆ ಮೆತ್ತಗಿನ ಶುಭ್ರ ಆಸನದಲ್ಲಿ ಕುಳಿತುಕೊಳ್ಳಲೇ ಅವನಿಗೆ ಸಂಕೋಚವಾಯಿತು. ಹುಡುಗಿ ಮತ್ತವಳ ತಂದೆ ಹಿಂಬದಿಯಲ್ಲಿ ಕುಳಿತುಕೊಂಡರು. ಕಾರು ಹೊರಟಿತು. ಶಿವನಿಗೆ ಗಾಳಿಯಲ್ಲಿ ತೇಲಾಡಿದಂತಾಯಿತು.

ಅವನು ಇದುತನಕ ಮೋಟಾರುಕಾರು ಅಥವಾ ಇನ್ನಿತರ ಯಾವದೇ ವಾಹನದಲ್ಲಿ ಕುಳಿತುಕೊಂಡಿರಲಿಲ್ಲ. ಆ ಅನುಭವ ಅವನಿಗಿರಲಿಲ್ಲ. ಕಾರು ರಭಸದಿಂದ ಹೊರಟಾಗ ಮೊದಮೊದಲು ಅವನಿಗೆ ಭಯವೇ ಆಯಿತು. ತನ್ನ ದೇಹವೇ ಗಾಳಿಯಲ್ಲಿ ಹಾರಿಕೊಂಡು ಹೋಗುತ್ತಿದೆಯೋ ಎಂಬಂತಾಯಿತು ಒಂದು ಹೊಸ ಲೋಕವೇ ತನ್ನ ಕಣ್ಣ ಮುಂದೆ ಓಡಿಕೊಂಡು ಬರುವಂತೆ ಅನಿಸಿತವನಿಗೆ. ಕಾರು ರಭಸದಿಂದ ಸಾಂಥೋಮಿನ ಕಡೆಗೋಡಿತು. ಓಡಿಯೋಡಿ ಅವನು ವಾಸಿಸುತ್ತಿದ್ದ ಕೊಂಪೆಯೆಡೆಗೆ ಬಂತು! ಶಿವನ ಹೊಟ್ಟೆಯಲ್ಲಿ ತಳಮಳವೆದ್ದಿತು! ಮುನಿಸ್ವಾಮಿ ಮತ್ತು ತಾನು ಕುಳಿತುಕೊಳ್ಳುತ್ತಿದ್ದ ಸ್ಥಳ ಕಂಡಿತು. ಆ ಕಹಿಬೇವಿನ ಮರದ ಗೆಲ್ಲುಗಳು, ಅದರಾಚೆ ತಾನಿದ್ದ ಗುಡಿಸಲ ಮಾಡು ದೃಷ್ಟಿಪಥದಲ್ಲಿ ಹಾದು ಮಾಯವಾದುವು. ಕಾರು ಭರ್ರೆಂದು ಒಂದು ಅರ್ಧ ವೃತ್ತವನ್ನೆಳೆದ ಹಾಗೆ ತಿರುಗಿಕೊಂಡು, ವಿಶಾಲವಾದ ಕಾಂಪೌಂಡಿನೊಳಗೆ ಸೇರಿ, ಹೂದೋಟದ ನಡುವಿನಿಂದ ಹಾದು ವಿಶಾಲವಾದ ಭವನದೆದುರು ನಿಂತುಕೊಂಡಿತು.

ಅಲ್ಲಿಯೋ ನಿಂತಿದ್ದ ಸೇವಕನು ಮುಂದೆ ಬಂದು ಸಲಾಂ ಹೊಡೆದು ಬಾಗಿಲು ತೆರೆದನು. ಎಲ್ಲರೂ ಕೆಳಗಿಳಿದರು.

ಬಂಗಲೆಯ ಚಾವಡಿಯಿಂದ ಸುಂದರವಾದ ಉಡುಪನ್ನು ಧರಿಸಿದ ಮಧ್ಯಮ ವಯಸ್ಸಿನ ಹೆಂಗಸು ಇಳಿದು ಬಂದಳು.

" ನೋಡಮ್ಮಾ! ನೋಡಮ್ಮಾ! ಅವನೇ.... ಅವನೇ ನನ್ನನ್ನು ಅಲ್ಲಿಂದ ತಪ್ಪಿಸಿದವನು! " ಹುಡುಗಿ ಆತುರದಿಂದ ತಾಯಿಗೆ ಹೇಳಿದಳು.

ಹೆಂಗಸು ಮುಂದೆ ಬಂದು ಆದರದಿಂದ ಕೇಳಿದರು:

" ನೀನೇ ಏನಪ್ಪಾ ಶಿವನ್ ? "

ಹೌದೆಂದು ಶಿವನ್ ತಲೆಯಲ್ಲಾಡಿಸಿದನು.

" ಅವನಿಗೆ ಬೇರೆ ಗತಿಯಿಲ್ಲ. ಇಲ್ಲಿಯೇ ಕೆಲಸ ಮಾಡಿಕೊಂಡಿರಲಿ ಎಂದು ಕರೆದು ತಂದೆ! " ಹುಡುಗಿಯ ತಂದೆ ಹೇಳಿದರು.

ತುಸು ಹೊತ್ತು ಸುಮ್ಮನಿದ್ದು ಹೆಂಗಸು ಹೇಳಿದಳು:

" ಹಾಂ! ನಮ್ಮ ಹೂದೋಟ ನೋಡಲು ಒಬ್ಬ ಹುಡುಗ ಬೇಕಾಗಿದ್ದ. ಇವನೇ ದೊರೆತುದು ಒಳ್ಳೆಯದೇ ಆಯಿತು!...."

"ಇಲ್ಲಿ ಬಾ" ಅವರು ಶಿವನಿಗೆ ಹೇಳಿದರು. "ನನ್ನೊಡನೆ ಬಾ. ನೋಡು, ಈ ಹೂದೋಟದ ಆರೈಕೆ ನಿನ್ನ ಕೆಲಸ. ದಿನಾಲೂ ಸಂಜೆ ಮತ್ತೆ ಬೆಳಗ್ಗೆ ಗಿಡಗಳಿಗೆ ನೀರು ಹೊಯ್ಯಬೇಕು... ಇಗೋ ಇಲ್ಲಿ ಬಾ. ಈ ಕಾರ್ ಪಕ್ಕದಲ್ಲುಂಟಲ್ಲಾ ಈ ಚಿಕ್ಕ ಕೋಣೆ, ಇದು ನಿನಗೇ ಆಯಿತು. ಇಂದು ಸಂಜೆ ಗಿಡಗಳಿಗೆ ಹೇಗೆ ನೀರೆರೆಯುವುದು ಎಂದು ನಾನೇ ಹೇಳಿಕೊಡುತ್ತೇನೆ."

ಅಮ್ಮಾವರು ಎಲ್ಲ ವಿಷಯಗಳನ್ನು ಹೇಳಿದರು ಶಿವನ್ ಕೃತಜ್ಞತೆಯಿಂದ ತಲೆ ಬಾಗಿದನು. ಅವರ ಪಕ್ಕದಲ್ಲಿ ನಿಂತ ಹುಡುಗಿಯ ಮುಗ್ಧ ನೋಟವು ಮಾತ್ರ ಅವನೆದೆಯನ್ನು ಉಬ್ಬಿಸಿತು.

---

## ೬

ಬೆಳಕು ಕರಗಿ ಕತ್ತಲು ಮುಸುಕಿತು. ಹೂ ಗಿಡಗಳಿಗೆಲ್ಲ ನೀರು ಚಿಮುಕಿಸಿ ಶಿವನ್ ಕಾರ್ ಷೆಡ್ಡಿನ ಪಕ್ಕದ ತನ್ನ ಚಿಕ್ಕ ಕೋಣೆಯನ್ನು ಸೇರಿದನು. ವಿದ್ಯುದ್ದೀಪದ ಗುಂಡಿಯನ್ನೊತ್ತಿ ಬೆಳಕು ಚೆಲ್ಲಿಸಿದನು.

ತೀರ ಚಿಕ್ಕದಾದ ಕೋಣೆಯದು. ಒಂದು ಸಣ್ಣ ಬೆಂಚು ಅದರೊಳಗಿತ್ತು. ಅಮ್ಮಾವರು ಕರುಣೆಯಿಂದ ಅವನಿಗೊಂದು ಕಂಬಳಿಯನ್ನು ಕೊಟ್ಟಿದ್ದರು. ಮರುದಿನ ಹೊಸ ಇಜಾರು, ಅಂಗಿಗಳನ್ನು ಹೊಲಿಸಿ ಕೊಡುತ್ತೇನೆ ಅಂದಿದ್ದರು. ಅಷ್ಟರಿಂದಲೇ ಅವನಿಗೆ ಸ್ವರ್ಗವೇ ಕೈಗೆ ಸಿಕ್ಕಂತಾಯಿತು! ಬೆಂಚ ಮೇಲೆ ಕಂಬಳಿಯನ್ನು ಹಾಸಿ, ಅದರ ಮೇಲೆ ಮಲಗಿಕೊಂಡನು. ಮಲಗಿದಲ್ಲೇ ಅಪೂರ್ವ ಸುಖದಲ್ಲಿ ಮೈ-ಮರೆತನು. ಆನಂದಸಾಗರದಲ್ಲಿ ತೃಪ್ತಿ ಪೂರ್ಣ ಮನದಿಂದ ಓಲಾಡಿದನು! ಎಷ್ಟು ಸುಖವೆನಿಸಿತವನಿಗೆ! ಹಿಂದೆ ಅನುಭವಿಸಿದ ಕಷ್ಟ-ನಷ್ಟ, ಉಪವಾಸ, ಅಲೆದಾಟ ಎಲ್ಲವೂ ಕನಸಿನ ರಾಜ್ಯದಲ್ಲಿ ಕರಗಿ ಹೋದುವು.

" ಏ ಹುಡುಗ ! ಹುಡುಗ !! " ಕೂಗು ಕೇಳಿ ಶಿವನ್ ತಟ್ಟನೆ ಮೂಲೆ ಕೋಣೆಯ ಹೊರಗೆ ಬಂದನು.

ಬಾಗಿಲಲ್ಲೇ ಹೆಂಗುಸೊಬ್ಬಳು ನಿಂತಿರುವುದು ಅವನಿಗೆ ಕಾಣಿಸಿತು

" ಎಷ್ಟು ಕೂಗಬೇಕೋ ನಿನ್ನನ್ನು ? ಕಿವಿ ಕೇಳಿಸುವದಿಲ್ಲವೇ ? " ಅವಳು ಕೇಳಿದಳು, ಸಿಡುಕಿನ ಧ್ವನಿಯಿಂದ

ಅವಳ ಆರ್ಭಟೆ, ಅವಳ ಸಿಡುಕಿನ ಧ್ವನಿ ಕೇಳಿ ಶಿವನ್ ಬೆದರಿದನು. ಅವಳು ಗಟ್ಟಿಯಾಗಿ, ಒಂದು ಹೆಜ್ಜೆ ಮುಂದೆ ಸರಿದು ಕೇಳಿದಳು:

" ನಿನ್ನ ಹೆಸರೇನೋ ? " ಅವಳು ಯಾರೆಂದು ಶಿವನಿಗೆ ತಿಳಿಯಲಿಲ್ಲ. ಅದಲ್ಲದೆ ಅವಳ ಸ್ವರದಲ್ಲಿನ ಬಿಗುತನ ಕೇಳಿ, ಅವನು ನಿಜಕ್ಕೂ ಹೆದರಿದನು. ಇವಳು ತನ್ನ ಮೇಲೇಕೆ ಇಷ್ಟು ಸಿಟ್ಟುಗೊಳ್ಳುತ್ತಾಳೆ ಎಂದವನು ಕಳವಳಪಟ್ಟನು

" ಏನೋ ಬಾಯಿ ಬರುವುದಿಲ್ಲವೇ ? ನಿನ್ನ ಹೆಸರೇನೋ ? " ಅದೇ ಧಾಟಿಯಲ್ಲಿ ಅವಳು ಕೇಳಿದಳು.

ಕಂಪಿಸುವ ಖಿನ್ನ ಧ್ವನಿಯಲ್ಲಿ ಶಿವನ್ ಉಸುರಿದ:

" ಶಿವನ್...."

" ಹೆಸರು ಹೇಳಲು ಇಷ್ಟ್ಯಾಕೆ ಹೆದರುತ್ತೀಯೋ ? " ಆ ಹೆಂಗಸು ಗಟ್ಟಿಯಾಗಿ ಕೇಳಿ, ತಟ್ಟನೆ ಜೋರಾಗಿ ನಗಲು ತೊಡಗಿದಳು. ಅವನಿಗೆ ಅವಳ ನಗು ನೋಡಿ ಗಾಬರಿಯೇ ಆಯಿತು ತಟ್ಟನೆ ನಗು ನಿಲ್ಲಿಸುತ್ತಾ ಅವಳು ಸಂತಸಧಿಂದ ಅಂದಳು: " ಓಹೋ ! ನನ್ನ ಸ್ವರ ಕೇಳಿ ನೀನು ಹೆದರಿರಬೇಕು; ಅಲ್ಲವೇ ಶಿವನ್ ?.... ಏನು ಮಾಡಲಿ ಹೇಳು ನನ್ನ ಅಭ್ಯಾಸವೇ ಹಾಗೆ. ಮಾತು ಸ್ವಲ್ಪ ಜೋರು. ಸ್ವರ ಸ್ವಲ್ಪ ಬಿರುಸು. ಹೆದರಗಿದರಬೇಕಾದ ಅವಶ್ಯಕತೆ ಏನೂ ಇಲ್ಲ.... ನಿಂತಿದ್ದಿ ಯಾಕೆ ಶಿವನ್ ? ಬಾ ನನ್ನ ಹಿಂದೆ. ಊಟ ಗೀಟ ಬೇಡವೇನು ? "

ಹೆಂಗಸು ಮುಂದೆ ಸರಿದಳು. ಅವಳ ಹಿಂದೆ ಶಿವನ್ ಹೊರಟನು. ಹತ್ತು ಹೆಜ್ಜೆ ಮುಂದೆ ನಡೆದಿರಲಿಕ್ಕಿಲ್ಲ; ಹೆಂಗಸು ತಟ್ಟನೆ ನಿಂತಳು. ನಿಂತು ಹಿಂತಿರುಗಿ, ಶಿವನ ಭುಜ ತಟ್ಟಿ ಹೇಳಿದಳು:

" ನೀನು ಭಾರಿ ಹುಷಾರಿಯಿದ್ದೀಯಪ್ಪಾ ಶಿವನ್ ! ಅಲ್ಲಾ, ಕಳ್ಳರ ನಡುವಿನಿಂದ ನಮ್ಮ ಶೀಲೆಯನ್ನು ಬಿಡಿಸಿ ತರಲು ನಿನಗೆ ಧೈರ್ಯ

ಬಂತಲ್ಲವೇ ?... ... ಕೇಲಿ ಎಲ್ಲವನ್ನೂ ನನ್ನ ಬಳಿ ಹೇಳಿದಳು. ಅಲ್ಲಾ- ನನಗೊಬ್ಬ ನಿನ್ನಷ್ಟು ದೊಡ್ಡವನಾದ ಮಗನಿದ್ದಾನೆ. ಕೇರ ಪ್ರೇಲಿ ! ಎಲ್ಲಿಯೋ ಪಟ್ಟಣದಲ್ಲಿ ಮೋಟಾರ್ ವರ್ಕಶಾಪಿನಲ್ಲಿ ಹೇಡಿಯ ಕೆಲಸದಲ್ಲಿದ್ದಾನೆ. ಥೇಟು ಕಳ್ಳ !.... ಸಂಬಳದಲ್ಲಿ ನನಗೊಂದು ಪೈ ಕೂಡ ಕೊಡುವುದಿಲ್ಲ. ಎಲ್ಲಾ ಸಿನಿಮಾ ಗಿನಿಮಾ ಅಂತ ಹಾಳು ಮಾಡುತ್ತಾನೆ. ಓಹೋ ! ಹೊತ್ತಾಗುತ್ತೆ ... ಯಾಕೆ ನಿಂತುಕೊಂಡಿದ್ದೀ. ಬಾ, ಬಾ. ನನ್ನದೊಂದು ಊಟ ಮುಗಿದರೆ ನನ್ನ ಕೆಲಸವೆಲ್ಲ ತೀರಿದ ಹಾಗೆಯೇ "

ಆಮೇಲೆ ಗಟ್ಟಿಯಾದ ಧ್ವನಿ; ಕೋಪದಿಂದಲೋ ಎಂಬಂತಿರುವ ಮಾತುಗಳ ರೀತಿ: ಆದರೂ ಹೂವಿನಂತಹ ಹೃದಯದ ಆ ಹೆಂಗಸನ್ನು ನೋಡಿ ಇವನಿಗೆ ಸಂತೋಷವಾಯಿತು. ಆವನಿಗೆ ತಾನು ತನ್ನ ತಾಯಿಯೊಡನೇ ಇದ್ದೇನೆಯೋ ಎಂಬಂತೆನಿಸಿತು. ಆವಳ ಸಾಮೀಪ್ಯವೇ ಅಷ್ಟೊಂದು ಆಹ್ಲಾದಕರವಾಗಿತ್ತು.

ಸಡ್ಡನ ಹಿಂದಿಗೆ ಬಂದು, ಕಟ್ಟಡದ ಬದಿಯಲ್ಲೇ ನಡೆದು, ಮನೆಯ ಹಿಂಬದಿಯಲ್ಲಿರುವ ಅಡುಗೆ ಕೋಣೆಯತ್ತ ನಡೆದರವರು.

" ಕುಳಿತುಕೋ ಈ ಜಗಲಿಯ ಮೇಲೆ. ನಿನಗೆ ಬಟ್ಟಲು ತರುತ್ತೇನೆ. ಈ ಲೋಟ ತಗೊಂಡು ಆ ನಲ್ಲಿಯಿಂದ ನೀರು ತಾ.. "

ಇವನ್ ನೀರು ತರಲು ಸಮೀಪದ ನಲ್ಲಿಯ ಬಳಿಗೆ ಹೋದಾಗಲೂ, ಆಕೆ ಅಡುಗೆ ಕೋಣೆಯೊಳಗಿಂದ ಬಿಡುವಿಲ್ಲದ ತನ್ನ ಮಾತಿನ ಮಳೆಯನ್ನು ಮುಂದುವರಿಸಿದಳು:

" ... ಬಟ್ಟಲೊಂದು ಹಲಗೆಯ ಮೂಲೆಯಲ್ಲೆಲ್ಲೋ ಬಿದ್ದುಕೊಂಡಿರಬೇಕು. ಅದು ನೋಡು ಇವನ್. ನನ್ನ ಮಗ ಕಳೆದ ವರ್ಷದ ತನಕ ಇಲ್ಲೇ ಇದ್ದ. ಇಲ್ಲಿಯೇ ಹೂತೋಟಕ್ಕೆ ನೀರೆರೆದುಕೊಂಡಿದ್ದ. ಇಲ್ಲಿದ್ದರೆ ಸಿನಿಮಾಗಳಿಗೆ ನೆನೆದಂತೆ ಹೋಗಲಿಕ್ಕಾಗುತ್ತದೆಯೇ ? ಅದಕ್ಕೆ ವರ್ಕಶಾಪಿಗೆ ಹೋಗಿದ್ದಾನೆ. ವರ್ಕಶಾಪಿನ ಮ್ಯಾನೇಜರ ಅಯ್ಯರರ ಮನೆಯಲ್ಲಿ ಊಟ ಅವನಿಗೆ. ರಾತ್ರಿ ವರ್ಕಶಾಪಿನಲ್ಲೇ ಮಲಗುತ್ತಾನೆ.... ಹೇಳಿದೆನಲ್ಲ, ಒಂದು ಪೈ ಉಳಿಸುವುದಿಲ್ಲ.... ಹಾಂ ! ಬಟ್ಟಲು ಸಿಕ್ಕಿತು. ಇಗೋ, ಇದನ್ನು ನಲ್ಲಿಗೊಯ್ದು ತೊಳೆದು ತಂದು ಉಣಲು ಕುಳಿತುಕೋ.... ಹೊತ್ತಾಗುತ್ತದೆ...."

ಶಿವನ್ ಅವಳು ಹೇಳಿದ ಹಾಗೇ ಮಾಡಿದನು. ಅವನಿಗೆ ಅವಳ ಮಾತುಗಳು ಕೇಳಿಸಿಯೇ ಹೊಟ್ಟೆ ತುಂಬಿದಂತಾಯಿತು. ಅನ್ನ ಪದಾರ್ಥಗಳನ್ನು ಬಡಿಸುತ್ತಾ ಅವಳು ಕೇಳಿದಳು:

" ಹೌದೋ ಶಿವನ್ ! ನೀನು ನನ್ನನ್ನು ಏನೆಂದು ಕರೆಯುವಿ? "

ಶಿವನಿಗೆ ಏನು ಉತ್ತರ ಕೊಡಬೇಕೆಂದು ತಿಳಿಯಲಿಲ್ಲ. ತುಸು ಲಜ್ಜೆಯಿಂದಲೇ—" ನನಗೆ ಗೊತ್ತಿಲ್ಲ...." ಅಂದನು.

" ಎಂಥಾ ಹೆಣ್ಣಿನ ನಾಚಿಕೆಯೋ ನಿನಗೆ? ನೋಡು, ನನ್ನ ಹೆಸರು ಸುಂದರಾಂಬಾ. ಶೀಲೆ ನನ್ನನ್ನು ಸುಂದ್ರಮ್ಮಾ ಅಂತ ಕರೀತಾಳೆ. ನೀನೂ ಹಾಗೆಯೇ ಕರೆ. ಹಾಂ ? "

ಊಟ ಮಾಡುತ್ತಾ ಶಿವನ್ ' ಹೂಂ ' ಎಂದು ತಲೆಯಲ್ಲಾಡಿಸಿದನು.

" ಏನೋ, ಹೂಂ, ಹೂಂಂ ಎಂದು ತಲೆ ಮಾತ್ರ ಅಲ್ಲಾಡಿಸುತ್ತಿ. ಸ್ವಲ್ಪ ಮಾತಾಡಬಾರದೇನೋ ನನ್ನ ಮಗ ಹೀಗಿರಲಿಲ್ಲವಪ್ಪಾ! ಮಾತಾಡಿಸಿ ಮಾತಾಡಿಸಿ ಜೀವ ತೆಗೆಯುತಿದ್ದ ! ತೀರ ಪೋಲಿ!........ ಹಾಂ! ಇಷ್ಟು ಬೇಗ ಎದ್ದಿ ! ಹೊಟ್ಟೆ ತುಂಬಿತೇ ?...."

" ತುಂಬಿದೆ...."

" ತುಂಬಿದೆ ಅಂತ ಏನೂ ಸಂಕೋಚ ಮಾಡಬೇಡವಪ್ಪಾ. ನಿನ್ನ ಹಾಗಿದ್ದ ಹುಡುಗರು ಹೊಟ್ಟೆ ತುಂಬ ಉಣ್ಣಲೇ ಬೇಕು.... ನನ್ನ ಮಗ ಉಣ್ಣುವ ಕಾಲುವಾಸಿಯಷ್ಟು ನೀ ಉಂಡಿಲ್ಲ...."

" ಸಾಕು.... ನನ್ನ ಹೊಟ್ಟೆ ತುಂಬಿತು...."

" ಬೇಡಪ್ಪಾ ಬೇಡ.... ನಾ ಹೆಚ್ಚು ಬಡಿಸುವುದಿಲ್ಲ. ಮತ್ತೆ ಅಜೀರ್ಣ ಗಿಜೀರ್ಣಂತ ಹಿಡಿದೀತು. ಒಂದೊಂದು ರೋಗ. ನನ್ನ ಮಗ ಮೂಗಿನ ತನಕ ದಿನಾ ಊಟ ಮಾಡಿ ಹೊಟ್ಟೆ ನೋವು, ಕಣ್ಣು ನೋವು, ತಲೆ ನೋವು ಅಂತ ಒಂದಲ್ಲ ಒಂದು ಅವನಿಗೆ ತಪ್ಪಿದ್ದೇ ಇಲ್ಲ. ಹೂಂ.... ಏಳು ಹಾಗಾದರೆ. ನಲ್ಲಿಯ ಬಳಿ ಹೋಗಿ ಬಟ್ಟಲನ್ನು ತೊಳೀ. ಬಟ್ಟಲನ್ನ ನೀನೇ ನಿನ್ನ ಕೋಣೆಯಲ್ಲಿಟ್ಟುಕೋ ಶಿವನ್ ಊಟಕ್ಕೆ ಬರುವಾಗ ತಗೊಂಡು ಬಾ ಏನು ? "

ಶಿವನ್ ನಲ್ಲಿಯೆಡೆಗೆ ಹೋಗಲು,- ಅಡುಗೆ ಕೋಣೆಯಲ್ಲಿ ಅವಸರ ದಿಂದ ಪಾತ್ರೆಗಳನ್ನೆಲ್ಲ ಆಚೀಚೆ ತೆಗೆದಿರಿಸುತ್ತಾ ತನ್ನ ಮಾತನ್ನು ತಡೆ ಯಿಲ್ಲದೆ ಮುಂದುವರಿಸಿದಳಾಕೆ.

" ಯಾವಾಗ ಬರುತ್ತಾಳೋ ಆ ಚಿನ್ನಪ್ಪೊಣ್ಣ ! ಚಿನ್ನಪ್ಪೊಣ್ಣ ನಿನಗೆ ಗೊತ್ತಿದೆಯೋ ಇಲ್ಲವೋ ಶಿವನ್ ? ಆ ಕರ್ಮದ ಮಾರಿ, ಕೆಲಸ ದವಳು ' ಹೇಳಿದ ಸಮಯಕ್ಕೆ ಬರಲಿಕ್ಕೇ ಇಲ್ಲ ! ಬೆಳಕು ಹರಿಯು ವಾಗ ಬಂದು ಈ ಪಾತ್ರೆಗಳನ್ನೆಲ್ಲ ತೊಳೆದು ಕೊಟ್ಟಳೋ ನಾನು ಉಳಿದೆ. ಇಲ್ಲವಾದರೆ ' ಏನು ಕಾಫಿ ಆಗಿಲ್ಲವೇ ? ' ಎಂದು ಅಮ್ಮಾವರು ಬಡಬಡಿಸ ಲಿಕ್ಕೆ ಉಂಟೇ ಉಂಟು ! ಚೆಟ್ಟಿಯಾರರು ಸಿಟ್ಟುಗೊಳ್ಳಲಿಕ್ಕುಂಟು ! ಚೆಟ್ಟಿಯಾರರು ಗೊತ್ತಿಲ್ಲೇನು ನಿನಗೆ ? ನಮ್ಮ ಶೀಲೆಯ ತಂದೆ.... ನೀ ಹೆಸರು ಕೇಳಿರಬಹುದು, ಚೆಟ್ಟಿಯಾರ್ ಬ್ಯಾಂಕ್ ಅಂತ. ಅದರ ಮೆನೇಜರ್ ಯಾರೆಂತ ತಿಳಿದಿದ್ದೀ ? ಇವರೇ....! "

ಶಿವನ್ ಬಟ್ಟಲನ್ನು ತೊಳೆದು, ಅವಸರದಿಂದ ಅತ್ತಿತ್ತ ಓಡುತ್ತ ಕೆಲಸ ಮಾಡುತ್ತಿರುವ ಸುಂದ್ರಮ್ಮನ, ಅಷ್ಟೇ ಅವಸರದಿಂದ ಹೊರಡುವ ಅವಳ ನುಡಿಗಳನ್ನು ಕೇಳುತ್ತ ನಿಂತುಕೊಂಡನು. ನಿಂತು ಕಾಲುಗಳು ನೋಯತೊಡಗಲು ಹೇಳಿದನು:

" ಅಮ್ಮಾ , ನಾ ಹೋಗಲೇ ? "

" ಅಂ ! ಅಮ್ಮಾ ಅಂತ ನನ್ನನ್ನು ಹೇಳಿದ್ದೇನೋ ? ಸುಂದ್ರ ಮ್ಮಾ ಅಂತ ಕರೆದರೆ ಸಾಕೋ ! ನಾ ಯಾರಂತ ಮಾಡಿದ್ದೀ ? ನಿನ್ನ ಹಾಗೇ ಒಬ್ಬಳು ಕೆಲಸದವಳು. ನೀನು ಹೂದೋಟ ನೋಡಿಕೊಳ್ಳು ವವ. ನಾ ಅಡುಗೆ ಕೋಣೆಯನ್ನು ನೋಡಿಕೊಳ್ಳುವವಳು. ಅಲ್ಲ ವೇನು ? " ಸುಂದ್ರಮ್ಮ ಚೆನ್ನಾಗಿ ನಕ್ಕಳು. ಶಿವನ್ ಅವಳ ನಗುವನ್ನು ಕಂಡು ನಕ್ಕನು.

" ನಾ ಹೋಗುತ್ತೇನೆ...." ಅವನು ಉಸುರಿದ.

" ಅಂ ? ಏನಿಷ್ಟವಸರ ಶಿವನ್ ? ನಿದ್ದೆ ಬರುತ್ತಿದೆಯೇನು ? ನನ್ನ ಮಗ ಇಷ್ಟು ಬೇಗನೆ ನಿದ್ದೆ ಮಾಡುತ್ತಿರಲಿಲ್ಲ. ಓಹೋ ! ತಿಳಿ ಯಿತು ! ತಿಳಿಯಿತು ! ನಿನಗೆ ಕೆಲಸ ಮಾಡಿ ದಣುವಾಗಿರಬಹುದು. ನನ್ನ ಮಗ ಕೆಲಸ ಮಾಡಲಿಕ್ಕೆ ಇಲ್ಲ. ಹೆಸರಿಗೆ ಹೂಗಿಡಗಳಿಗೆ ನೀರೆರೆ

ಯುವವನು ಅವನು. ಆದರೆ ನಿಜವಾಗಿ ನೀರೆರೆಯುವುದು ಯಾರೆಂತ ತಿಳಿದಿದ್ದೀ? ನಾನೇ! ಹೂಂ....ಹೂಂ.... ಹೋಗಿ ನಿದ್ದೆ ಮಾಡು ಆಯಾಸವಾಗುವುದಿದ್ದರೆ!....''

“ ಇಲ್ಲ ನನಗೆ ಆಯಾಸವಾಗುವುದಿಲ್ಲ! ''

'' ಆಯಾಸವಾಗುವುದಿಲ್ಲವೆಂದು ನನ್ನ ದಾಕ್ಷಿಣ್ಯಕ್ಕೆ ಸುಳ್ಳು ಗಿಳ್ಳು ಹೇಳಬೇಡ ಶಿವನ್! ಮತ್ತೆ ಹೊಟ್ಟೆ ನೋವು ಕಣ್ಣು ನೋವು ಎಂದು ಒಂದೊಂದೇ ಆರಂಭವಾದೀತು? ನನ್ನ ಮಗ ಸರಿಯಾಗಿ ನಿದ್ದೆ ಮಾಡಲಿಕ್ಕೇ ಇಲ್ಲ. ಅಂತಲೇ ಏನಾದರೊಂದು ನೋವು ಅವನನ್ನು ಪೀಡಿಸದೆ ಇರುವುದಿಲ್ಲ! ನಾನು ಹೇಳುತ್ತೇನೆ ನೋಡು— ಈ ಸಿನಿಮಾ ನೋಡಿ ಮೂವತ್ತು ವರ್ಷವಾಗುವಾಗ ಅವನ ಕಣ್ಣು ಕುರುಡಾಗುತ್ತದೆ!....... ಶಿವನ್, ನನ್ನ ಮಾತು ಕೇಳುವುದಿದ್ದರೆ ಕೇಳು. ಈ ಸಿನಿಮಾ ಗಿನಿಮಾ ಅಂತ ಇಲ್ಲದ ಸಲ್ಲದ ಹುಚ್ಚು ಕಟ್ಟಿಕೊಳ್ಳಬೇಡ. ತಿಳಿಯಿತೇ?... ಯಾಕೆ ನಿಂತಿದ್ದೀ ಇನ್ನೂ? ಓಹೋ! ನನ್ನ ಬಾಯಿ ನೋಡುತ್ತ ನಿಂತರೆ ಇಡೀ ರಾತ್ರಿ ನೀನಿಲ್ಲಿ ನಿಲ್ಲಬೇಕಾದೀತು! ನನಗೇನು ಅಂತ ಮಾಡಿದ್ದೀ ಶಿವನ್? ಅಮ್ಮಾವರನ್ನೋ ಚೆಟ್ಟಿಯಾರರನ್ನೋ ಕೇಳು. ಅವರು ಹೇಳುತ್ತಾರೆ— ಈ ಸುಂದ್ರಮ್ಮಗೆ ಮಾತಾಡುವ ಮರುಳು ಅಂತ! ಹೋಗು, ಹೋಗು. ನಿಲ್ಲ ಬೇಡ! ಆ ಬಟ್ಟಲನ್ನು ತಕ್ಕೊಂಡೇ ಹೋಗು!....''

ಶಿವನ್ ಅಲ್ಲಿಂದ ಹೊರಟು ಕಾರ್‌ಷೆಡ್ಡಿನ ಪಕ್ಕದಲ್ಲಿನ ತನ್ನ ಕೋಣೆಗೆ ಬಂದನು. ಅವನ ಮನವನ್ನಿಡೀ ಸುಂದ್ರಮ್ಮನೇ ವ್ಯಾಪಿಸಿದ್ದಳು. ಅವಳ ಸ್ವರ, ಅವಳ ಮಾತಿನ ಝರಿ. ಅವಳ ಲಘು ಹೃದಯ, ಅವಳ ಪ್ರೇಮಲ ಮನಸ್ಸು ಅವನ ಮನವನ್ನು ಸೂರೆಗೊಂಡಿತು. ಆನಂದದಿಂದ ಹಿಗ್ಗಿಕೊಂಡು ಅವನು ತನ್ನ ಕೋಣೆಗೆ ಬಂದನು.

ತನ್ನ ಕೋಣೆಯಾಚೆ, ಷೆಡ್ಡಿನ ಆಚೆ ಪಕ್ಕವಲ್ಲಿ ಮನೆಯ ಗೋಡೆಯ ಮೇಲೆ ಕಂಬಗಳಿಂದ ಕಿಟಕಿಯೊಂದು ಶಿವನಿಗೆ ಕಾಣಿಸಿತು. ಆ ಕಿಟಕಿಯ ಮೂಲಕ ಕೋಣೆಯೊಳಗಿನ ಪ್ರಕಾಶ ಹೊರಚೆಲ್ಲಿತ್ತು. ಒಳಗಿನ ಕೋಣೆಯಲ್ಲಿ ಏನಿವೆ ಎಂದು ನೋಡುವ ಕುತೂಹಲವಾಯಿತವನಿಗೆ. ಅಂತೆಯೇ ಮುಂದೆ ಸಾಗಿ ಕಿಟಕಿಯಲ್ಲಿಣಿಕಿ ನೋಡಿದನು.

ಕಿಟಿಕಿಗೆದುರಾಗಿಯೇ ಒಂದು ಮೇಜಿತ್ತು. ಮೇಜಿನ ಮೇಲೆಲ್ಲ ಪುಸ್ತಕಗಳು. ಮೇಜಿನಾಚೆಗೆ ಕುರ್ಚಿಯ ಮೇಲೆ ಆ ಹುಡುಗಿ ಕುಳಿತಿದ್ದಳು. ಹೌದು, ಹೆಸರೇನು? ಶೀಲೆ ಎಂದಲ್ಲವೇ ಸುಂದ್ರಮ್ಮ ಹೇಳಿದ್ದು. ಎಂದು ಶಿವನ್ ಚಿಂತಿಸಿದನು. ಶೀಲೆಯನ್ನು ಕಣ್ಣು ತುಂಬ ನೋಡಿದನು.

ಕಿಟಿಕಿಯ ಹೊರಗೆ ನಿಂತ ಶಿವನ್ ಶೀಲೆಗೆ ಗೋಚರಿಸಿರಬೇಕು. ಅವಳು ಕಿಟಿಕಿಯೆಡೆಗೆ ಬಂದು ಕೇಳಿದಳು:

" ಯಾರಲ್ಲಿ ನಿಂತವರು? "

ತಾನಲ್ಲಿ ನಿಂತು ನೋಡಿದುದು ತಪ್ಪಾಯಿತೇನೋ ಎಂದು ಹೆದರಿಕೊಂಡು ಶಿವನ್ ತನ್ನ ಕೋಣೆಯತ್ತ ಹೊರಳಿದನು.

" ಶಿವನ್! ನಿಲ್ಲು. ಎಲ್ಲಿಗೆ ಹೋಗುತ್ತೀ? " ಕೇಳಿದಳಾಕೆ.

" ಊಟ ಮಾಡಿ ನನ್ನ ಕೋಣೆಗೆ ಹೋಗುತ್ತಿದ್ದೇನೆ...." ಅಂದನವನು.

' ಆದರೆ ಇಲ್ಲಿ ನಿಂತುಕೊಂಡು ನೋಡಿದ ಹಾಗೆ ನನಗನಿಸಿತಲ್ಲಾ! "

" ಹೌದು... ತಪ್ಪಾಯಿತು.... ಏನೋ ನೋಡಬೇಕೆಂದು...." ಶಿವನ್ ತಡವರಿಸಿದನು

" ಅದರಲ್ಲೇನು ತಪ್ಪು ಶಿವನ್? ನೀನು ನನಗೆಷ್ಟು ಉಪಕಾರ ಮಾಡಿದ್ದೀ? ಅಮ್ಮಾ ಹೇಳುತ್ತಾಳೆ--- ನಿನ್ನ ಹೊರತು ನನ್ನ ಜೀವ ಉಳಿಯುತ್ತಿರಲಿಲ್ಲ ಎಂದು...."

ಶಿವನ್ ತಲೆ ತಗ್ಗಿಸಿದನು. ಅವನ ಕಣ್ಣೆದುರು ಆ ರಾತ್ರಿಯ ದೃಶ್ಯಗಳೆಲ್ಲ ಹಾದು ಹೋದುವು. ಭಯ, ಕಳವಳ, ಉದ್ವೇಗಗಳ ಆ ನಿಮಿಷಗಳು! ಹೆದರಿಕೆ ಮತ್ತು ಆಯಾಸಗಳಿಂದ ಕಂಗಾಲಾದ ಆ ಹುಡುಗಿ. ' ಓಡು, ನಿನ್ನ ಮನೆಗೋಡು ' ಎಂದು ಭುಜ ಹಿಡಿದು ನೂಕಿದಾಗ. ' ಅಯ್ಯೋ ನನಗೆ ಕಾಲೇ ಬಾರದು ' ಎಂದು ದೈನ್ಯತೆಯಿಂದ ಅಂಗಲಾಚಿದ ಶೀಲೆ!

" ಯಾರೊಡನೆ ಮಾತಾಡುತ್ತೀ ಶೀಲಾ? " ಕೋಣೆಯೊಳಗಿಂದ ಪ್ರಶ್ನೆ ಕೇಳಿ ಶಿವನ್ ತಲೆ ಎತ್ತಿ ನೋಡಿದನು.

ಶೀಲೆಯ ತಾಯಿ ಕಿಟಕಿಯೆಡೆಗೇ ಬಂದರು. ಶಿವನನ್ನು ಕಂಡು ನಯವಾಗಿ ಹೇಳಿದರು:

“ ಹೋ ! ಶಿವನೇನು ? ತುಂಬ ರಾತ್ರಿಯಾಯಿತಲ್ಲವೇ ? ನಿನ್ನ ಊಟವಾಯಿತೇ ? ”

“ ಆಯಿತು ” ಅಂದನು ಶಿವನ್.

“ ಹಾಗಾದರೆ ನಿದ್ದೆ ಮಾಡು. ನಾಳೆ ನಸುಕಿನಲ್ಲಿ ನೀನು ಏಳಬೇಕು. ಹೂಗಿಡಗಳಿಗೆಲ್ಲ ನೀರೆರೆಯಬೇಕು.... ಇನ್ನೂ ಬಹಳ ಕೆಲಸಗಳಿವೆ. ಮತ್ತೆ ಆಯಾಸವಾದೀತು. ಹೋಗಿ ನಿದ್ದೆ ಮಾಡು.

ಶಿವನ್ ತನ್ನ ಕೋಣೆಗೆ ನಡೆದನು. ಬೆಂಚ ಮೇಲೆ ಅಂಗಾತವಾಗಿ ಮಲಗಿದನು. ದೀಪವನ್ನು ಹೊತ್ತಿಸಲಿಲ್ಲ ಕೂಡ. ಶೀಲೆಯ ಕೋಣೆಯ ಬೆಳಕೇ ಅವನ ಕೋಣೆಯ ಕತ್ತಲ ಸಾಂದ್ರತೆಯನ್ನು ಕಡಿಮೆ ಮಾಡಿತ್ತು. ಪ್ರಕಾಶವು ಮಂದವಾಗಿತ್ತು ವಾತಾವರಣವು ಅಷ್ಟು ಶಾಂತವಾಗಿತ್ತು. ಮನಸ್ಸೂ ಅರಳಿತ್ತು. ಮಲಗಿದ ಶಿವನಿಗೆ ಅಲ್ಲಿಯೇ ನಿದ್ದೆ ಬಂದು ಹೋಯಿತು. ನಿದ್ದೆಯಲ್ಲಿ ಅವನು ನಸುನಗುತ್ತಿದ್ದನು. ಇದೇನು ಸವಿಗನಸು ಕಾಣುತ್ತಿದ್ದನೋ !

---

## ೨

ಹೂಗಿಡಗಳಿಗೆ ನೀರು ಹಾಕುವದು ಸುಖದ ಕೆಲಸ; ಸುಲಭವಾದುದು ಕೂಡ. ನಲ್ಲಿಯ ತುದಿಗೆ ರಬ್ಬರ್ ಟ್ಯೂಬನ್ನು ಕಟ್ಟಿದರಾಯಿತು. ರಬ್ಬರ್ ನಳಿಗೆಯ ಇನ್ನೊಂದು ತುದಿಯನ್ನು ಬೆರಳಿನಿಂದೊತ್ತಿ ಬೇಕಾದ ಗಿಡಗಳಿಗೆ ತುಂತುರು ತುಂತುರಾಗಿ ನೀರನ್ನು ಚಿಮುಕಿಸಿದರಾಯಿತು. ಶಿವನಿಗಂತೂ ಈ ಕೆಲಸ ಬಹು ಪ್ರಿಯವಾದುದು. ಹೂ ಅಂದರೆ ಮೊದಲೇ ಅವನಿಗಷ್ಟೊಂದು ಇಷ್ಟ !

ಹೂದೋಟದ ಮಧ್ಯದಲ್ಲಿ ಒಂದು ಮಂಟಪವಿತ್ತು. ಮಂಟಪ ವೆಂದರೆ ಹೂ-ಬಳ್ಳಿಗಳನ್ನು ಬಿದಿರ ಚಪ್ಪರದಲ್ಲಿ ಹರಿಯು ಬಿಟ್ಟು ಮಂಟಪ ದಂತೆ ರೂಪು ಕೊಟ್ಟಿದ್ದರು. ಒಳಗೆ ಮರದ ಆಸನಗಳಿದ್ದುವು. ಮಂಟ ಪದ ಮಧ್ಯದಲ್ಲಿ ಒಂದು ಶ್ರೀಕೃಷ್ಣನ ವೇಣುಗಾನದ ಪ್ರತಿಮೆಯೂ ಇತ್ತು. ಮಂಟಪದ ಹೊರಗೆ ದೂರದಲ್ಲಿ ನಿಂತು ಶಿವನ್ ಹೂ-ಬಳ್ಳಿಗಳ ಮೇಲೆ ನೀರೆರಚುತ್ತಿದ್ದನು.

“ ಅರೆರೆ ! ಶಿವನ್! ನನ್ನನ್ನು ಒದ್ದೆ ಮಾಡಿ ಬಿಡಬೇಡಪ್ಪೋ ? ” ಮಂಟಪದೊಳಗಿನಿಂದ ಕೂಗು ಕೇಳಿಸಿತು. ಶಿವನ್ ನೀರ ಪ್ರವಾಹ ವನ್ನು ತಕ್ಷಣ ನಿಲ್ಲಿಸಿದನು.

ಕೈಯಲ್ಲೊಂದು ಪುಸ್ತಕ ಹಿಡಕೊಂಡು ಶೀಲೆ ಮಂಟಪದೊಳಗಿಂದ ಹೊರ ಬಂದಳು.

“ ಒಳ್ಳೆ ಜನ ನೀನು ಶಿವನ್ ! ಯಾರಿದ್ದಾರೆ ಎಂದು ನೋಡದೆ ಕಣ್ಣು ಮುಚ್ಚಿ ನೀರೆರಚುತ್ತೀ. ನೋಡು ನನ್ನನ್ನು....'' ನಸು ಮುನಿಸಿ ನಿಂದ ಶೀಲೆಯೆಂದಳು.

ಶಿವನ್ ಅವಳನ್ನು ನೋಡಿದನು. ಸುಂದರವಾಗಿ ಬಾಚಿ ಸಿಂಗರಿ ಸಿದ ಅವಳ ತಲೆಗೂದಲ ಮೇಲೆ ತುಂತುರು ತುಂತುರಾಗಿ ಬಿದ್ದ ನೀರ ಹನಿ ಗಳು ನಿಂತಿದ್ದುವು. ಅವಳ ಸುಕೋಮಲ ಮುಖದ ಮೇಲೂ ಹನಿಗಳು ಬಿದ್ದಿದ್ದುವು. ಉಟ್ಟ ಉಡುಪು ಒದ್ದೆಯಾಗಿತ್ತು. ಪುಸ್ತಕವೂ ತುಸು ಒದ್ದೆಯಾಗಿತ್ತು. ಅದನ್ನು ನೋಡಿ ಶಿವನಿಗೆ ಕಳವಳವಾಯಿತು; ಭಯವಾಯಿತು. ಹಸಿಗಣ್ಣುಗಳನ್ನು ಒರಸಿಕೊಂಡು “ ನಾನು ನೋಡಿರ ಲಿಲ್ಲ.... ತಪ್ಪಾಯ್ತು ... ಕ್ಷಮಿಸಬೇಕು. ..”

ಶಿವನ ಬಿಳುಪಾದ ಮುಖವನ್ನು ನೋಡಿ ಶೀಲೆಗೆ ದುಃಖವಾಯಿತು. ಪರರ ಮನಸ್ಸನ್ನು ನೋಯಿಸಬಾರದು ಎಂದವಳು ಶಾಲೆಯಲ್ಲಿ ಪಾಠ ಹೇಳಿಸಿಕೊಂಡಿದ್ದಳು. ಅವಳ ಕಾನ್ವೆಂಟ್ ಶಾಲೆಯ ‘ ಮದರ್ ’ ಕೂಡ ದಿನೇ ದಿನೇ ಅದನ್ನೇ ಹೇಳುತ್ತಿದ್ದರು. ಅಷ್ಟು ಮಾತ್ರವೇ ಅಲ್ಲ. ಶಿವನ್ ಅವಳಿಗೆ ಕೆಲಸದಾಳು ಅಲ್ಲ. ಅವನು ಅವಳ ಜೀವವನ್ನುಳಿಸಿ ದವನು. ಶಿವನಿಲ್ಲದಿರುತಿದ್ದರೆ ಅವಳು ಜೀವದಿಂದ ಇರುತ್ತಿದ್ದಳೋ ಇಲ್ಲವೋ ! ತಾಯಿ ಆ ಮಾತನ್ನು ಹೇಳುತ್ತಿದ್ದುದು ಶೀಲೆಗೆ ತಿಳಿಯದೆ

ಇಲ್ಲ. ತಾಯಿಯ ಆ ಮಾತು, ಶಿವನ ಮೇಲೆ ಅವಳಿಗಿರುವ ಆದರವನ್ನು ನೂರು ಪಾಲಷ್ಟು ಹೆಚ್ಚಿಸಿದೆ. ಶಿವನನ್ನು ಅವಳೆಂದೂ ಮರೆಯುವಂತಿಲ್ಲ. ನಸು ನಗುತ್ತ ಒಂದು ಹೆಜ್ಜೆ ಮುಂದೆ ಸರಿದು ಶೀಲೆ ಹೇಳಿದಳು:

“ ಓ ! ಅದರಲ್ಲೇನು ಶಿವನ್.... ನಾ ಸುಮ್ಮನೆ ಹೇಳಿದೆನಷ್ಟೆ. ’

“ ದಿನಾಲು ಈ ಹೊತ್ತಿನಲ್ಲಿ ನೀವಿಲ್ಲಿ ಇರುತ್ತಿರಲಿಲ್ಲ ... ” ಶಿವನ್ ಹೇಳಿದನು.

“ ಹೌದು. ನಾ ಶಾಲೆಗೆ ಹೋಗುತ್ತಿದ್ದೆ. ಇಂದು ರಜೆ........” ಶೀಲೆ ನುಡಿದಳು.

ಶಾಲೆ ! ಶಾಲೆ ಅಂದರೇನು ಎಂದು ಶಿವನಿಗೆ ಗೊತ್ತಿರಲಿಲ್ಲ. ಕೆಲವು ಮಕ್ಕಳು ಸ್ಲೇಟು ಪುಸ್ತಕಗಳನ್ನು ಹಿಡಕೊಂಡು ಹೋಗುವುದನ್ನು ಶಿವನ್ ಕಂಡಿದ್ದನು. ಧೈರ್ಯದಿಂದ ಅವರೊಡನೆ ‘ ಇದು ಯಾಕೆ ? ಎಲ್ಲಿಗೆ ಹೋಗುತ್ತೀ ? ’ ಎಂದು ಕೇಳಿದ್ದನು. ‘ ಶಾಲೆಗೆ ಹೋಗುತ್ತೇನೆ ’ ಎಂಬ ಉತ್ತರವೂ ಬಂದಿತ್ತು. ಆದರೆ ಶಾಲೆ ಅಂದರೇನು ?

ಶಿವನ್ ಕೇಳಿದ: “ ಶಾಲೆ ಅಂದರೇನು ಶೀಲಮ್ಮ ! ಅಲ್ಲಿ ಏನು ಮಾಡುತ್ತಾರೆ ? ”

“ ಅಯ್ಯೋ ನಿನಗೆ ಶಾಲೆ ಅಂದರೆ ಏನೆಂದು ಗೊತ್ತಿಲ್ಲಾ ? ” ಶೀಲೆ ಚೆನ್ನಾಗಿ ನಕ್ಕು ಬಿಟ್ಟಳು

ನಾಚಿಕೆಯಿಂದ ಮತ್ತು ಕಳವಳದಿಂದ ಶಿವನ್ ಒಟಗುಟ್ಟಿದ:

‘ ಇಲ್ಲಾ....’

“ ಒಳ್ಳೇ ತಮಾಷೆ ಇದು ” ಶೀಲೆ ಹೇಳಿದಳು: “ ಶಾಲೆ ಅಂದರೆ ಸಣ್ಣ ಪ್ರಾಯದ ಮಕ್ಕಳಿಗೆಲ್ಲ ಉಪಾಧ್ಯಾಯರು ಪಾಠ ಕಲಿಸಿ ಕೊಡುವ ಜಾಗ ”

“ ಪಾಠ ? ”

“ ಪಾಠ?!.... ಪಾಠ ಅಂದರೆ ಓದಲು ಬರೆಯಲು ಕಲಿಯುವುದು.”

“ ಓದಿ ಬರೆಯಲು ಕಲಿತರೆ ಏನುಪಯೋಗ ? ”

“ ಛಃ ! ಒಳ್ಳೇ ತಮಾಷೆಯ ಪ್ರಶ್ನೆ ಕೇಳುತ್ತೀ ? ಹುಡುಗರೆಲ್ಲ ಓದಿ ದೊಡ್ಡವರಾದಾಗ ಸರ್ಕಾರೀ ಕೆಲಸ ಹಿಡಿಯುತ್ತಾರೆ. ಹೆಚ್ಚು ಹಣ ಸಂಪಾದನೆ ಮಾಡುತ್ತಾರೆ. ಹುಡುಗಿಯರು ಓದಿ ದೊಡ್ಡವರಾದಾಗ

ಕತೆ-ಕಾದಂಬರಿ ಓದುತ್ತಾರೆ. ಅಮ್ಮ ಹೇಳುತ್ತಾಳೆ, ಮಕ್ಕಳಿಗೆ ಪಾಠ ಹೇಳಿ ಕೊಡಲೂ ಆಗುತ್ತದೆ ! " ಶೀಲೆ ನಕ್ಕಳು.

ಹೆಚ್ಚು ಹಣ ಸಂಪಾದನೆ ಮಾಡುತ್ತಾರೆ ಎಂಬ ಮಾತು ಶಿವನ ಮನವನ್ನು ಬಲವಾಗಿ ಸೆಳೆಯಿತು. ಓದು-ಬರೆಹ ಕಲಿಯಬೇಕು. ಸರಕಾರೀ ಕೆಲಸಕ್ಕೆ ಸೇರಬೇಕು. ತುಂಬ ಹಣ ಸಂಪಾದಿಸಬೇಕು. ಓ ! ತಾನೂ ಶಾಲೆಗೆ ಹೋಗಬಹುದೇ ? ತಾನೂ ಓದು-ಬರೆಹ ಕಲಿಯಬಹುದೇ ?

" ನಿನ್ನ ಶಾಲೆಗೆ ನಾನೂ ಬರಬಹುದೇನು ? " ಶಿವನ್ ಉತ್ಸುಕತೆಯಿಂದ ಕೇಳಿದನು.

ಶೀಲೆ ಕೂಡಲೇ ಉತ್ತರ ಕೊಡಲಿಲ್ಲ. ಕೆಲವು ಕ್ಷಣ ಚಿಂತಿಸಿ ಅನಂತರ ಹೇಳಿದಳು: " ನೀನೂ ಬರಬಹುದು. ಆದರೆ...."

" ಆದರೆ ಏನು ? "

" ಆದರೆ ಅಲ್ಲಿ ಶಾಲೆ ಸಂಬಳ ಕೊಡಬೇಕು. ಪುಸ್ತಕ ಕೊಳ್ಳಲು ಹಣ ಬೇಕು. ಅಷ್ಟು ಮಾತ್ರವಲ್ಲ. ದಿನಾಲೂ ಬೆಳಗ್ಗೆ ಒಂಬತ್ತು ಗಂಟೆಗೆ ಶಾಲೆಯಲ್ಲಿ ಹಾಜರಿರಬೇಕು. ಸಂಜೆ ಐದು ಗಂಟೆಯ ತನಕ ಶಾಲೆಯಲ್ಲೇ ಇರಬೇಕು...."

" ಓ ! ಹಾಗುಂಟೇ !.... ನನಗೆ ಗೊತ್ತಿರಲಿಲ್ಲ." ನಗುತ್ತ ಶಿವನ್ ಅಂದನು: " ಹಾಗಾದರೆ ನನಗೆ ಶಾಲೆ ಬೇಡ ! "

ಶಿವನ ನಗು ಮಾತಿನಲ್ಲೂ ನಿರಾಶೆಯು ಸುಳಿವಿತ್ತು. ಅದನ್ನರಿತು ಶೀಲೆ ಹೇಳಿದಳು:

" ಸುಂದ್ರಮ್ಮನ ಮಗ ವಿಶ್ವಂ ಇಲ್ಲಿ ಕೆಲಸ ಮಾಡಿಕೊಂಡಿದ್ದ. ಅವನು ಇಲ್ಲಿಲ್ಲಿಯೋ ರಾತ್ರಿ ಶಾಲೆಗೆ ಹೋಗಿ ಓದು-ಬರೆಹ ಕಲಿತನು. ಅವನಂತೆ ನೀನೂ ರಾತ್ರಿ ಶಾಲೆಗೆ ಹೋಗಬಹುದು."

" ರಾತ್ರಿ ಶಾಲೆ ಅಂದರೆ ? " ಶಿವನ್ ಕೇಳಿದ.

" ಅದು ಬಡವರಿಗಾಗಿಯೇ ಮೀಸಲಾದ ಶಾಲೆ. ಹಗಲೆಲ್ಲಿಯಾದರೂ ದುಡಿಯುವವರಿಗೆ ಓದು ಕಲಿಸುತ್ತಾರೆ ಅಲ್ಲಿ, ರಾತ್ರಿಯಲ್ಲಿ...."

ಹಾ ! ಶಾಲೆಗೆ ಹೋಗಿ ನಾ ಏನು ಮಾಡಬೇಕು, ಸುಮ್ಮನೆ ! " ಶಿವನ್ ತನ್ನ ಕೆಲಸವನ್ನು ಮುಂದುವರಿಸಿದನು.

"ಆದರೆ.... ಆದರೆ.... ಶಾಲೆಗೆ ಹೋದರೆ ನಿನಗೆ ಒಳ್ಳೆಯದು...." ಶೀಲೆ ಒಂದು ಹೆಜ್ಜೆ ಮುಂದೆ ಸರಿದು ಹೇಳಿದಳು. ಶಿವನ್ ಶಾಲೆಗೆ ಹೋಗಬೇಕೆಂದು, ಓದಲು–ಬರೆಯಲು ಕಲಿಯಬೇಕೆಂದು ಅವಳಿಗೇಕೋ ಆತುರ. ಅವನು ವಿದ್ಯಾವಂತನಾಗಿ ಎಲ್ಲರಂತೆ ಒಬ್ಬ ಗಣ್ಯ ಮನುಷ್ಯನಾಗಬೇಕೆಂದು ಅವಳಿಗೇನೋ ಆಶೆ. ಕಾತರದಿಂದ ಶೀಲೆ ಹೇಳಿದಳು:

"....ಕಲಿತು ವಿದ್ಯಾವಂತನಾದರೆ ದೊಡ್ಡ ಉದ್ಯೋಗ ಹಿಡಿಯಬಹುದು...."

"ಇಲ್ಲ.... ನಾ ಕಲಿಯುವುದಿಲ್ಲ ..." ಶಿವನ್ ಹೇಳಿದ.

ಕಲಿಯುವುದಿಲ್ಲ— ಎಂದು ಶಿವನ್ ನುಡಿದುದೇನೋ ನಿಜ. ಆದರೆ ಶಾಲೆ ಎಂಬ ಶಬ್ದ ಅವನ ಮನವನ್ನು ಬಲವಾಗಿ ಸೆಳೆಯಿತು. ಓದು ಎಂಬ ನುಡಿ ಅವನೆದೆಯನ್ನು ಸೇರಿಕೊಂಡಿತು. ತಾನೇಕೆ ಓದಬಾರದು? ತಾನೇಕೆ ಬರೆಯುವುದನ್ನು ಕಲಿಯಬಾರದು?

ಜೀವನದ ಪ್ರಗತಿಗೆ ಆಶೆಗಳೇ ರೆಕ್ಕೆಗಳು. ಅಸ್ಪಷ್ಟ ಆಶೆಗಳು ಶಿವನ ಮನಸ್ಸಿನಲ್ಲಿ ಮೂಡಿದುವು. ಆ ಆಶೆಗಳೇ ಪ್ರಬಲವಾದ ರೂಪವನ್ನು ತಾಳಿದುವು. ಮರುದಿನ ಅವನು ಶೀಲೆಯೊಡನೆ ಹೇಳಿದ:

"ನನಗೆ ರಾತ್ರಿ ಶಾಲೆಗೆ ಹೋಗಬೇಕೆಂದು ತುಂಬಾ ಆಶೆಯಿದೆ, ಶೀಲಮ್ಮ!"

---

## ೮

ವಿದ್ಯುದ್ದೀಪದ ಗುಂಡಿಯನ್ನು ಮೇಲಕ್ಕೊತ್ತಿ, ತನ್ನ ಬಟ್ಟೆಯನ್ನು ತೆಗೆದುಕೊಂಡು, ಬಾಗಿಲು ಮುಚ್ಚಿ ಶಿವನ್ ಅಡುಗೆಮನೆಯತ್ತ ತೆರಳಿದನು. ಅಡುಗೆ ಕೋಣೆಯ ಹೊರಗಿನ ಜಗುಲಿಯ ಮೇಲೆ ಕುಳಿತುಕೊಂಡನು. ಆದರೆ ಶಿವನ್ ಬಂದುದು ಸುಂದ್ರಮ್ಮನಿಗೆ ತಿಳಿಯಲಿಲ್ಲ.

ಅವಳು ಕೋಣೆಯೊಳಗೆ ತನ್ನ ಮಗನೊಡನೆ ಮಾತನಾಡುವುದರಲ್ಲಿಯೇ ಮಗ್ನಳಾಗಿದ್ದಳು. ಸ್ವಲ್ಪ ಹೊತ್ತು ಸುಮ್ಮನೆ ಕುಳಿತು ಅನಂತರ ಶಿವನ್ ಕೂಗಿದ: " ಸುಂದ್ರಮ್ಮಾ "

" ಯಾರೋ ಹೊರಗಿನಿಂದ ಕೂಗಿದರಲ್ಲಾ ? " ಗಂಡು ಧ್ವನಿ ಕೇಳಿಸಿತು.

" ಬೇರೆ ಯಾರು ? ಶಿವನೇ ಆಗಿರಬೇಕು ! ಅಲ್ಲವೇ ಶಿವನ್ ? "

" ಹೌದು ನಾನೇ " ಶಿವನ್ ಉತ್ತರ ಕೊಟ್ಟ. " ಆಗಿನಿಂದಲೇ ಕಾದು ಕುಳಿತಿದ್ದೇನಮ್ಮ ! "

" ಹಾಗಾದರೆ ಆಗಲೇ ಕೂಗಬಾರದಿತ್ತೇ ? ಯಾಕೆ ಮೂಕನಂತೆ ಕುಳಿತಿದ್ದೀ ? ನಾನು ನನ್ನ ಮಗನೊಡನೆ ಮಾತನಾಡುತ್ತಿದ್ದೆ...." ಒಳಗಿನಿಂದ ಸುಂದ್ರಮ್ಮ ಬೊಬ್ಬೆ ಹಾಕಿದಳು.

" ಯಾರದು ಶಿವನ್ ಅಂದರೆ ? " ಮಗನು ತಾಯಿಯೊಡನೆ ಕೇಳಿದನು.

" ಹೋ ! ನಿನಗೆ ಗೊತ್ತಿಲ್ಲವೇ ವಿಶ್ವಂ ? "

" ಇಲ್ಲವಲ್ಲ ! "

ಶಿವನಿಗೆ ಬಡಿಸುತ್ತಾ ಸುಂದ್ರಮ್ಮ ಶಿವನ ಕತೆಯನ್ನೆಲ್ಲ ಮಗನಿಗೆ ಅರುಹಿದಳು. ಶಿವನ್ ಅವಳು ಮಾತಾಡುತ್ತಿದ್ದಂತೆಯೇ ಊಟ ಮುಗಿಸಿ ಕೈ ತೊಳೆದು ಜಗಲಿಯಲ್ಲಿ ಕುಳಿತುಕೊಂಡನು.

ಶಿವನ್--ವಿಶ್ವಂ ಮುಖ ಮುಖ ನೋಡಿಕೊಂಡರು. ವಿಶ್ವಂ ಹೇಳಿದ " ಭೇಷ್ ಶಿವನ್ ! ಭಾರೀ ಕೆಲಸ ಮಾಡಿದ್ದೀ ! ನಾನಾದರೆ ಸಾಯುವವರು ಸಾಯಲಿ ಎಂದು ಹೇಳಿ ಸುಖದಲ್ಲಿ ಮಲಗಿಬಿಡುತ್ತಿದ್ದೆ ! "

ಶಿವನ್ ಕೂಡ ಮುಗುಳು ನಗು ಸೂಸಿದನು. ಮತ್ತು ವಿಶ್ವಂ ಜೇಬಿನೊಳಗೆ ಕೈ ಹಾಕಿ ಒಂದು ಸಿಗರೇಟು ತೆಗೆದು ತುಟಿಗಳೆಡೆಯಲ್ಲಿ ಸಿಲುಕಿಸಿ, ಬೆಂಕಿ ಕಡ್ಡಿ ಗೀಚಿ ಅದನುರಿಸಿ, ಹೊಗೆ ಸೇದತೊಡಗಿದನು.

" ಆಗೋ ! ಆಗೋ !! ನಾನು ಎಷ್ಟು ಸಲ ಹೇಳಬೇಕೋ ನಿನಗೆ ವಿಶ್ವಂ ? ಸಿಗರೇಟು ಸೇದಬೇಡಾಂತ ! ಕೇಳುವುದಿಲ್ಲಪ್ಪಾ ನೀನು, ತೆಗೆದು ಬಿಸಾಡೋ ಅದನ್ನು ! "

ಬಾಯಿ ತುಂಬ ಹೊಗೆ ಸೇದಿ, ಅದನ್ನು ಸುರುಳಿ ಸುರುಳಿಯಾಗಿ ಬಿಡುತ್ತ ವಿಶ್ವಂ ಹೇಳಿದ:

“ ನೀನೊಮ್ಮೆ ಇದನ್ನು ಸೇದಿ ನೋಡಬೇಕಮ್ಮ! ಆಮೇಲೆ ಹೇಳುವಿ ಇದರ ರುಚಿ ಏನಂತ! ಶಿವನ್.... ನೀನಾದರೂ ಇವನ್ನೊಮ್ಮೆ ಸೇದಬೇಕು ನೋಡು! ” ವಿಶ್ವಂ ಚೆನ್ನಾಗಿ ನಕ್ಕನು.

“ ಹೌದು, ಹೌದು! ನೀನು ಮಾತ್ರ ಬಾಲ ಕತ್ತರಿಸಿಕೊಂಡುದು ಸಾಲದು ಕಾಣುತ್ತೆ ” ಸುಂದ್ರಮ್ಮ ಸಿಡುಕಿನಿಂದ ಅಂದಳು: “ ಅವನಿಗೂ ಕೆಟ್ಟ ಬುದ್ಧಿ ಕಲಿಸಬೇಡ. ನನ್ನ ಮಾತು ಕೇಳು ಶಿವನ್. ಅವನ ಮಾತಿಗೆ ಕಿವಿಗೊಡಬೇಡ. ಶುದ್ಧ ಪೋಲಿ ಅವನು. ”

“ ಹ್ಹ—ಹ್ಹ—ಹ್ಹಾ ” ವಿಶ್ವಂ ಗಟ್ಟಿಯಾಗಿ ನಕ್ಕು ಬಿಟ್ಟನು.

“ ನೋಡು ಶಿವನ್, ಹೇಳಿದ್ದೊಂದೂ ಕೇಳುವುದಿಲ್ಲ ಈ ನನ್ನ ಮಗ! ದಿನಕ್ಕೊಂದು ಬಾರಿ ಇಲ್ಲಿಗೆ ಬರಬೇಕೂಂತ ಹೇಳಿದ್ದೇನೆ. ಆದರೆ ಎರಡು ತಿಂಗಳಿನಿಂದ ಇಲ್ಲಿಗೆ ಬರಲೇ ಇಲ್ಲ ಹುಡುಗ! ಸಿಕ್ಕಿದ ನಾಲ್ವತ್ತು ರೂಪಾಯಿ ಸಂಬಳದಲ್ಲಿ ಒಂದು ಪೈಕೂಡ ಉಳಿಸಿದ್ದಾನೋ? ಅದು ಕೂಡ ಇಲ್ಲ.... ”

“ ಸಂಬಳ ನನ್ನ ಖರ್ಚಿಗೇ ಸಾಕಾಗುವುದಿಲ್ಲ! ” ವಿಶ್ವಂ ಹೇಳಿದ.

“ ಖರ್ಚಿಗೇ ಸಾಕಾಗುವುದಿಲ್ಲವಂತೆ! ಹೇಳಿದ್ದು ಕೇಳಿದೆಯೋ ಶಿವನ್? ಖರ್ಚಿಗೇ ಸಾಕಾಗುವುದಿಲ್ಲವಂತೆ! ಸಾಕಾಗುವುದಾದರೂ ಹೇಗಂತ ನಾ ಕೇಳುತ್ತೇನೆ. ಸಿಕ್ಕಿದ ಹಣವನ್ನೆಲ್ಲ ಸಿನಿಮಾಕ್ಕೆ ಹಾಳು ಮಾಡಿದರೆ! ನಿನಗೆ ಖರ್ಚಾದರೂ ಎಲ್ಲುಂಟೋ ವಿಶ್ವಂ? ಊಟವಂತೂ ಅಯ್ಯರರ ಮನೆಯಲ್ಲಿ ಆಗುತ್ತಿದೆ.... ”

“ ಕಾಫಿಗೆ ಬೇಡವೇ? ಸಿಗರೇಟು ಬೇಡವೇ? ”

“ ಯಾಕೆ ಆ ಕೆಟ್ಟ ಅಭ್ಯಾಸಗಳೆಲ್ಲ? ಅವನ್ನೆಲ್ಲ ಬಿಡಬಾರದೇ? ಹಾಂ! ಏಕೆ ಎದ್ದು ಬಿಟ್ಟೆ ಶಿವನ್? ”

“ ಹೊಟ್ಟೆ ತುಂಬಿತು ” ಎನ್ನುತ್ತಾ ಶಿವನ್ ನಲ್ಲಿಯೆಡೆಗೆ ಹೋಗಿ ಬಟ್ಟಲನ್ನು ತೊಳೆದು ತನ್ನ ಕೋಣೆಗೆ ಹೊರಡಲನುವಾದನು.

“ ನಿಲ್ಲು ಶಿವನ್! ” ವಿಶ್ವಂ ಹೇಳಿದ “ ರಾತ್ರಿ ತುಂಬ ಆಯಿತು. ಇನ್ನು ಬಸ್ಸು ಸಿಗಲಿಕ್ಕಿಲ್ಲ ನನಗೆ. ರಾತ್ರಿಯನ್ನು ನಿನ್ನ ಕೋಣೆಯಲ್ಲೇ ಕಳೆಯಬೇಕಾಗಿದೆ. ಹೇಗೆ, ಮಲಗಲು ಜಾಗ ಕೊಡುವಿಯೋ ಏನು? ”

" ಹೋ ! ಧಾರಾಳವಾಗಿ ! " ಶಿವನ್ ಸಂತಸದಿಂದ ಅಂದನು.

ಸುಂಪ್ರಮ್ಮನನ್ನು ಬೀಳ್ಕೊಟ್ಟು ವಿಶ್ವಂ ಶಿವನ್ ಕೋಣೆಗೆ ನಡೆದರು. ಸುಂಪ್ರಮ್ಮ ಹೇಳಿದಳು:

" ಶಿವನಿಗೆ ಸಿಗರೇಟು ಸೇದಲು ಕಲಿಸಬೇಡ ವಿಶ್ವಂ ! "

" ಹಃ ! ನಾ ಕಲಿಸದೆ ಬಿಡಲಿಕ್ಕಿಲ್ಲ ಬಿಡು ! ಶಿವನ್, ನಾವು ಹೋಗೋಣ. ಅಮ್ಮನ ಬಾಯಿ ನೋಡಿಕೊಂಡು ನಿಂತರೆ ರಾತ್ರಿಯಿಡೀ ನಿಲ್ಲಬೇಕಾದೀತು ! " ನಗಾಡುತ್ತಾ ವಿಶ್ವಂ ಶಿವನ ಭುಜದ ಮೇಲೆ ಕೈ ಇಟ್ಟು ಮುಂದೂಡಿದನು. ಅಷ್ಟು ಸ್ನೇಹದಿಂದ ಅವನ ಭುಜದ ಮೇಲೆ ಯಾರೂ ಅದುವರೆಗೆ ಕೈ ಇಟ್ಟಿರಲಿಲ್ಲ. ಅಂತೆಯೇ ಈಗ ಶಿವನಿಗೆ ತುಂಬ ಸಂತೋಷವಾಯಿತು

ಇಬ್ಬರೂ ಮುನ್ನಡೆದರು. ಕೋಣೆಯನ್ನು ಸೇರಿದರು. ಅವನ ಹಿಂಬದಿ ನಿಂತು ವಿಶ್ವಂ ಹೇಳಿದ:

" ಓಹೋ ಶೀಲೆ ಇನ್ನೂ ಓದುತ್ತಾ ಇರುವಂತಿದೆ ! "

" ಹೌದು. ದೀಪದ ಪ್ರಕಾಶ ಕಾಣುತ್ತದೆ. " ಕೋಣೆಯ ಬಾಗಿಲು ತೆರೆದು ಶಿವನ್ ಹೇಳಿದನು. ವಿಶ್ವಂ ಕೋಣೆಯೊಳಗೆ ಬಂದು ಆಕಳಿಸುತ್ತಾ ಹೇಳಿದ:

" ಎಲ್ಲಿ, ನಿನ್ನ ಕಂಬಳಿ ಕೊಡು. ನೆಲದಲ್ಲಿ ಹಾಸಿ ಒರಗಿಕೊಳ್ಳುತ್ತೇನೆ. "

" ಊಹುಂ. ನೀನು ಬೆಂಚ ಮೇಲೆ ಮಲಗು. ನಾನು ನೆಲದಲ್ಲಿ ಮಲಗಿಕೊಳ್ಳುತ್ತೇನೆ " ಶಿವನಂದನು

" ಬೇಡ...."

" ನಾನು ಕೇಳಲಿಕ್ಕಿಲ್ಲ. "

" ಆಗಲಪ್ಪ, ಹಾಗೇ ಆಗಲಿ " ವಿಶ್ವಂ ಒಪ್ಪಿಕೊಂಡನು. ಅವನಿಗೆ ಬೇಕಾಗಿದ್ದೂ ಅದೇ ಆಗಿತ್ತು !

ಕಂಬಳಿಯನ್ನು ತೆಗೆದು ನೆಲದ ಮೇಲೆ ಹಾಸಿ ಶಿವನ್ ಅದರ ಮೇಲೆ ಕುಳಿತುಕೊಂಡನು. ವಿಶ್ವಂ ಬೆಂಚ ಮೇಲೆ ಒರಗಿಕೊಂಡನು.

" ದೀಪ ನಂದಿಸಲೇ ? " ಶಿವನ್ ಕೇಳಿದ

" ಹೂಂ. ನಂದಿಸಿ ಬಿಡು. ಬೆಳಕೇತಕ್ಕೆ ನಮಗೆ ಸುಮ್ಮನೆ ? " ವಿಶ್ವಂ ಹೇಳಿದನು.

ಶಿವನ್ ಗುಂಡಿಯನ್ನು ಕೆಳಗೊತ್ತಿ ದೀಪವನ್ನು ನಂದಿಸಿದನು. ವಿಶ್ವಂ ಸಿಗರೇಟೊಂದನ್ನು ಉರಿಸಿಕೊಂಡನು.

" ಸಿಗರೇಟು ಸೇದುತ್ತೀಯಾ ? ಬೇಕೇ ಒಂದು ? " ವಿಶ್ವಂ ಕೇಳಿದ.

" ನಿನ್ನ ತಾಯಿ ಹೇಳಿದ್ದಲ್ಲವೇ ? " ಶಿವನ್ ನಕ್ಕನು.

ಕೊಂಚ ಹೊತ್ತು ಸುಮ್ಮನಿದ್ದು ವಿಶ್ವ ಹೇಳಿದ:

" ಮುಂದೇನು ಮಾಡುತ್ತೀ ? "

" ಅಂದರೆ ? "

" ಅಂದರೆ ನೀನಿಲ್ಲಿಯೇ ಗಿಡಗಳಿಗೆ ನೀರೆರೆದುಕೊಂಡು ಕಾಲ ಕಳೆಯುತ್ತೀಯಾ ? ಅಲ್ಲ, ನನ್ನಂತೆ ಒಳ್ಳೆಯ ಕೆಲಸಕ್ಕೆ ಸೇರುವ ಆಲೋಚನೆಯಿದೆಯೇ ? ''

" ಗತಿಯಿಲ್ಲದ ನನಗೆ ಇವರೇ ಕೆಲಸ ಕೊಟ್ಟರು. ಆದ್ದರಿಂದ...."

" ಮಣ್ಣು ಬೀಳಲಿ ಅದಕ್ಕೆ ! ನಿನಗೆ ನನ್ನ ಹಾಗೇ ಆಗಲು ಮನಸ್ಸಿದ್ದರೆ ಒಂದು ಕೆಲಸ ಖಾಲಿ ಇದೆ ಶಿವನ್ ! ನಾ ಆಫೀಸ್ ಬಾಯ್ ಆಗಿದ್ದೆ. ಇನ್ನು ಮುಂದೆ ನಾ ವರ್ಕಶಾಪಿನಲ್ಲಿ ಮೆಕ್ಯಾನಿಕ್ ಆಗುವೆನು. ಆಗ ವರ್ಕಶಾಪಿನ ಬಾಯ್ ಕೆಲಸ ಖಾಲಿ ಬೀಳುತ್ತದೆ. '' ವಿಶ್ವಂ ಹೊಗೆ ಕಾರುತ್ತಾ ಅಂದನು.

" ಬಾಯ್ ಕೆಲಸ ಅಂದರೇನು ವಿಶ್ವಂ ? " ಶಿವನ್ ಕುತೂಹಲದಿಂದ ವಿಚಾರಿಸಿದನು.

" ಭಾರೀ ಒಳ್ಳೇ ಕೆಲಸ ಶಿವನ್ ! " ವಿಶ್ವಂ ಥಟ್ಟನೆ ಎದ್ದು ಕುಳಿತು ಉದ್ಗರಿಸಿದ ಉತ್ಸಾಹದಿಂದ " ಆ ಬಗ್ಗೆ ನಾನು ಗ್ಯಾರಂಟಿ ! ಒಂದು ಸೈಕಲ್ ಕೂಡ ಕೊಡುತ್ತಾರೆ. ಅದೂ ಮಜಾವೇ ! ಅಯ್ಯರರು ಹೇಳಿದ ಕೆಲಸ ಮಾಡಿದರಾಯಿತು. ವರ್ಕಶಾಪಿಗೆ ಬಂದು ಹೋಗುವವರ ದಸ್ಕತು ಹಾಕಿಸಿ ಅಯ್ಯರರು ಇಲ್ಲದಿದ್ದರೆ ಬರದಿಟ್ಟು ಕೊಳ್ಳಬೇಕು."

" ಅಯ್ಯೋ, ನನಗೆ ಬರೆಯಲಿಕ್ಕೇ ಬಾರದಲ್ಲ ! "

" ಓಹೋ ! " ವಿಶ್ವಂ ಮೆಲ್ಲನೆ ಒರಗಿಕೊಂಡು, ನಿಧಾನವಾಗಿ ಹೇಳಿದ: " ಬರೆಯಲಿಕ್ಕೆ ಬರುವುದಿಲ್ಲವೇನು ಶಿವನ್ ? ಅಂದರೆ ಈ ಪಟ್ಟಣದಲ್ಲಿ ನಿನಗೆ ಕಾಸಿನ ಬೆಲೆಯಿಲ್ಲ. ಓದು-ಬರೆಹ ತಿಳಿಯದಿದ್ದರೆ

ಏನು ಪ್ರಯೋಜನ ಹೇಳು! ಸಾಯುವ ತನಕ ನೀನು ಗಿಡಗಳಿಗೆ ನೀರು ಹಾಕಿಕೊಂಡು ಇರಬೇಕಷ್ಟೆ...."

ಶಿವನ್ ಆರ್ತನಾಗಿ ವಿಶ್ವಂನನ್ನು ನೋಡಿದನು. ತುಸು ಹೊತ್ತು ಸುಮ್ಮನಿದ್ದು ವಿಶ್ವ ಒಮ್ಮೆಲೆ ಶಿವನೆಡೆಗೆ ಮುಖ ತಿರುಗಿಸಿ ಉತ್ಸಾಹದಿಂದ ಅಂದ:

"ಹಾಂ! ಹೇಳಿದ ಹಾಗೆ, ನಿನಗೆ ಮನಸ್ಸಿದ್ದರೆ ಒಂದು ಕೆಲಸ ಮಾಡಬಹುದು. ಇಲ್ಲಿಯೇ ಕೊಂಪೆಯಾಚೆಗೆ ಇರುವ ದೊಡ್ಡ ಇಗರ್ಜಿಯಲ್ಲಿ ರಾತ್ರಿಯಲ್ಲಿ ಬಡವರಿಗಾಗಿ ಧರ್ಮಾರ್ಥ ಶಾಲೆ ನಡೆಯಿಸುತ್ತಿದ್ದಾರೆ. ನೀನು ಅಲ್ಲಿಗೆ ಸೇರಬಹುದು ನಾನೂ ಕಲಿತುದುದು ಅಲ್ಲಿಯೇ...."

"ನನ್ನ ಕೆಲಸಕ್ಕೆ ತೊಂದರೆಯಾಗಲಿಕ್ಕಿಲ್ಲವೇ ವಿಶ್ವಂ?" ಶಿವನ್ ಕೇಳಿದನು.

"ಕೆಲಸಕ್ಕೆ ತೊಂದರೆಯಾಗುವುದು ಹೇಗೆ? ಶಾಲೆ ನಡೆಯುವುದು ರಾತ್ರಿ ಎಂಟು ಗಂಟೆಯಿಂದ ಹತ್ತು ಗಂಟೆಯ ತನಕ. ಆಗ ನಿನಗೆ ಕೆಲಸವೇನಿದೆ ಹೇಳು...."

"ಏನೂ ಇಲ್ಲ!"

"ಅಂದಮೇಲೆ ತೊಂದರೆಯೇನು? ನೀನು ನಾಳೆಯೇ ಸೇರಿಬಿಡಬೇಕು ಶಿವನ್!" ವಿಶ್ವಂ ನುಡಿದ.

"ಆದರೆ ಚೆಟ್ಟಿಯಾರರು ಒಪ್ಪಿಯಾರೇ?..." ಶಿವನ್ ತಡವರಿಸಿದ.

"ಒಪ್ಪದೆ ಏನು? ಒಪ್ಪಿಯೇ ಒಪ್ಪುತ್ತಾರೆ. ನೀನೇನು ಅವರ ಕಾಲಲ್ಲಿ ನಡೆಯುವುದಿಲ್ಲವಲ್ಲ?... ನಾಳೆ ರಾತ್ರಿಯೇ ಇಗರ್ಜಿಗೆ ಹೋಗು. ಇಗರ್ಜಿಯ ಕಂಪೌಂಡಿನಲ್ಲೇ ಒಂದು ಉದ್ದವಾದ ಕಟ್ಟಡವಿದೆ. ಅದೇ ಶಾಲೆ. ಅಲ್ಲಿ ಒಬ್ಬರು ಮುದುಕ ಗುರುಗಳಿದ್ದಾರೆ. ಅವರು ನಿನ್ನ ಹೆಸರು ಕೇಳುವರು. ಆನಂತರ ಅಕ್ಷರ ಅಭ್ಯಾಸ ಮಾಡಿಸುವರು. ಸಂಬಳ ಗಿಂಬಳ ನೀನೊಂದು ಪೈಯೂ ಬಿಚ್ಚಬೇಕಾಗಿಲ್ಲ...."

ಶಿವನ್ ತಲೆ ತಗ್ಗಿಸಿ ಯೋಚನಾಪರವಶನಾಗಿದ್ದನು. ಒಂದು ನಿಮಿಷ ಮೌನವಾಗಿದ್ದು ಶಿವನೊಡನೆ ಮುಖ ಹೊರಳಿಸಿ ವಿಶ್ವಂ ಹೇಳಿದ:

"ಹಾಂ! ನಿನಗೆ ಸ್ಲೇಟು ಪುಸ್ತಕಗಳಿಗೂ ಖರ್ಚಿಲ್ಲ. ನನ್ನ ಸ್ಲೇಟು ಪುಸ್ತಕಗಳೇ ಅಮ್ಮನ ಬಳಿ ಇರಬೇಕು. ಕೇಳಿ ತೆಗೆದುಕೋ!"

" ಆಂ ? " ಉದ್ಗರಿಸುತ್ತಾ ಶಿವನ್ ತಲೆ ನೆಗ್ಗಿ " ಹೌದು ! ಹೌದು ! " ಎನ್ನುತ್ತ ತಲೆ ತಗ್ಗಿಸಿದನು.

ವಿಶ್ವಂ ಇನ್ನೊಂದು ಬೀಡಿಯನ್ನು ಉರಿಸಿಕೊಂಡನು.

———

೬

ಗೇಟಿನ ಬಳಿ ಸ್ಟೂಲೊಂದರ ಮೇಲೆ ಕುಳಿತು ಕಿರಣಸಿಂಗ ತೂಕಡಿಸುತ್ತಿದ್ದ. ಶಿವನ್ ಅವನ ಸಮೀಪ ಒಂದು ನಿಮಿಷ ನಿಂತು, ಮೆಲ್ಲನೆ ಕೂಗಿದ:

" ಕಿರಣಸಿಂಗ್ ! "

ಬಡಿದೆಬ್ಬಿಸಿದಂತೆ ಕಿರಣಸಿಂಗ ಎದ್ದು ನಿಂತು, ಅಭ್ಯಾಸ ಬಲದಿಂದ ಚಟ್ಟನೆ ಒಂದು ಸಲಾಂ ಹೊಡೆದು ಕಣ್ಣು ತೆರೆದನು.

ಕಿರಣಸಿಂಗ ಸಲಾಂ ಹೊಡೆದುದು ಕಂಡು ಶಿವನಿಗೆ ನಗು ಬಂತು. ಕಣ್ಣು ತೆರೆದಾಗ, ತಾನು ಸಲಾಂ ಕೊಟ್ಟುದು ಶಿವನಿಗೆ ಎಂದು ತಿಳಿದು ಕಿರಣಸಿಂಗನ ಮುಖ ಬಿಳುಪಾಯಿತು.

" ಓ ! ನೀನೋ ? " ಅವನು ತಡವರಿಸಿದ. " ಸಿಗರೇಟು ತರಲು ಚೆಟ್ಟಿಯಾರರು ನಿನ್ನನ್ನು ಕಳುಹಿಸಿದರೋ ಏನು ?...."

ಒಂದು ಕ್ಷಣ ಸುಮ್ಮನಿದ್ದು ಮುಗುಳು ನಗು ಸೂಸುತ್ತಾ ಶಿವನ್ ಹೇಳಿದನು:

" ಇಲ್ಲ.... ನಾ ಶಾಲೆಗೆ ಹೋಗುತ್ತೇನೆ. ಗೇಟನ್ನು ತೆರೆಯುವಿಯಾ ? "

" ಶಾಲೆಗೆ ? " ಕಣ್ಣರಳಿಸಿ ಕಿರಣಸಿಂಗ ಹೇಳಿದ: " ಭೇಷ್ ! ಹುಷಾರ ಆಗುತ್ತಿಯಲ್ಲೋ ? ಆಗಲಿ, ಆಗಲಿ. ವಿಶ್ವಂ ಶಾಲೆಗೆ ಹೋಗಿ ವರ್ಕಶಾಪನ್ನು ಸೇರಿಕೊಂಡ. ನೀನು ಎಲ್ಲಿ ಸೇರುತ್ತೀಯೋ ನೋಡಬೇಕು ! " ಎಂದೆನ್ನುತ್ತಾ ಬಾಗಿಲು ತೆರೆದನು.

ರಸ್ತೆಯಲ್ಲಿ ಜನ ಸಂಚಾರ ಕಡಿಮೆಯಾಗಿತ್ತು. ಶಿವನ್ ಅಗಲ ಕಿರಿದಾದ 'ಫುಟ್ ಪಾತಿ' ನಲ್ಲೇ ಮುಂದೆ ನಡೆದನು. ಗೇಟು ದಾಟಿ ರಸ್ತೆಯನ್ನು ಸೇರಿದಾಗ, ಅವನ ದೃಷ್ಟಿಯೆದುರು, ಕ್ಷೀಣ ಬೆಳಕಿನಲ್ಲಿ ಕೊಂಪೆಯು ಗೋಚರಿಸಿತು. ಅವನ ಮೈಯೋಕೋ ಒಮ್ಮೆಗೆ ಜುಮ್ಮ್ ಎನಿಸಿಕೊಂಡಿತು! ಒಂದು ದಿನ ಇಂತಹ ಮುಚ್ಚಂಜೆಯ ಕಾಲವಲ್ಲೇ ಅವನು ಆ ಕೊಂಪೆಯನ್ನು ಪ್ರವೇಶಿಸಿದ್ದ. ಆದರೆ ಈಗ ಶಾಲೆಗೆ ಹೊರಟಿದ್ದಾನೆ! ಈಗ ಓದಲು ಬರೆಯಲು ಹೊರಟಿದ್ದಾನೆ! ಎಂತಹ ಲಕ್ಷಣದ ಸಮಯವಾಗಿತ್ತೋ ಅದು! ಶಿವನಿಗೆ ಮುನಿಸ್ವಾಮಿ ಕುಳಿತುಕೊಳ್ಳುತ್ತಿದ್ದ ಗೋಡೆ ಕಾಣಿಸಿತು. ಅದರಾಚೆ ಗಾಳಿಗೆ ಕಂಪಿಸುವ ಕಹಿಬೇವಿನ ಮರದೆಲೆಗಳು ಕಾಣಿಸಿದುವು. ಕಹಿಬೇವಿನ ಮರದಾಚೆಗೇ ತಾನಿದ್ದ ಗುಡಿಸಲು! ಮುನಿಸ್ವಾಮಿಯ ಹೆಂಡತಿ ಈಗೇನು ಮಾಡುತ್ತಿದ್ದಾಳೋ? ಅವಳನ್ನೊಮ್ಮೆ ಹೋಗಿ ನೋಡಬೇಕೆಂದೆನಿಸಿತು ಶಿವನಿಗೆ. ಆದರೆ ಮರುಕ್ಷಣದಲ್ಲಿ, ತನ್ನ ಗಂಡನನ್ನು ಸೆರೆಮನೆಗಟ್ಟಿದವನನ್ನು ಕಂಡು ಅವಳು ರಾದ್ಧಾಂತವೆಬ್ಬಿಸಲಿಕ್ಕಿಲ್ಲವೇ ಎಂಬ ಸಂಶಯ ಮನಸದಲ್ಲಿ ಮೂಡಿ, ಕೊಂಪೆಗೆ ಹೋಗಬೇಕೆಂಬ ಅವನ ಚಿಂತೆಗೆ ಪರದೆಯನ್ನೆಳೆದು ಬಿಟ್ಟಿತು. ಅದೇನೂ ಇರಲಿ; ತಾನೀಗ ಶಾಲೆಗೆ ಹೋಗುತ್ತಿದ್ದೇನೆ!--- ಶಾಲೆಗೆ!! ಎಂದು ಶಿವನ ಮನಸ್ಸುಬ್ಬಿಕೊಂಡಿತು. ಆ ಚಿಂತನೆಯ ಹಿಂದೆಯೇ ಮುಗುಳು ನಗು ಸೂಸುವ ಕಿರಣಸಿಂಗನ ಮಾತುಗಳು ಕಿವಿಗೆ ಹೊಡೆದುಕೊಂಡಂತಾದುವು. 'ವಿಶ್ವಂ ಶಾಲೆಗೆ ಹೋಗಿ ವರ್ಕಶಾಪನ್ನು ಸೇರಿದ. ನೀನೆಲ್ಲಿ ಸೇರುತ್ತೀಯೋ ನೋಡಬೇಕು!' ಈ ಮಾತುಗಳ ನೆನಪಿನ ಬೆನ್ನಿನಲ್ಲೇ ಚೆಟ್ಟಿಯಾರರ ನುಡಿಗಳು ಮನದಲ್ಲಿ ಮರುಕಳಿಸಿದುವು.

ಶೀಲೆ ಸೂಚಿಸಿದ, ವಿಶ್ವಂ ಉದ್ರೇಕಿಸಿದ ಶಾಲೆಗೆ ಹೋಗಬೇಕೆಂಬ ತನ್ನ ಮನದಭಿಲಾಷೆಯನ್ನು ಶಿವನ್ ಮೊದಲು ಸುಂದ್ರಮ್ಮಳೊಡನೆ ತೋಡಿಕೊಂಡನು. ಸುಂದ್ರಮ್ಮ ತನ್ನ ಮಾತುಗಳ ಮಳೆಯೊಡನೆ 'ನೀನು ಶಾಲೆಗೆ ಹೋಗಲೇ ಬೇಕು. ನಿನ್ನ ಕಲಿಯುವಿಕೆಯ ಅನಂತರ ನನ್ನ ಮಗನೊಡನೆ ಹೇಳಿ ವರ್ಕಶಾಪಿನಲ್ಲಿ ಕೆಲಸ ತೆಗೆಸಿ ಕೊಡಿಸುತ್ತೇನೆ. ಗಿಡಗಳಿಗೆ ನೀರೆರೆಯುವ ಈ ಸೇವಕತನ ಯಾವ ಪ್ರಯೋಜನಕ್ಕೂ

ಬಾರದು' ಎಂದು ಬಿಟ್ಟಳು. 'ಆದರೆ ಹೋದರೂ ಅಮ್ಮಾವರ ಒಳಿ ಅಪ್ಪಣೆ ಪಡೆದುಕೋ' ಎಂದು ಕೂಡ ಎಚ್ಚರಿಸಿದಳು.

ಅಮ್ಮಾವ್ರ ಒಳಿ ಹೇಗೆ ಕೇಳಲಿ ಎಂದು ಶಿವನಿಗೆ ತಿಳಿಯಲಿಲ್ಲ ಕೇಳದೆ ತಾನು ಶಾಲೆಗೆ ಹೋಗುವುದು ಸರಿಯಲ್ಲವೆಂದು ಎಣಿಸಿಕೊಂಡು ಅದಕ್ಕೊಂದು ಉಪಾಯ ಹೂಡಿದನು.

ಒಂದು ದಿನ ತೋಟದಲ್ಲಿ ಶೀಲೆ ಕಾಣಸಿಕ್ಕಾಗ ಹೇಳಿದ:

"ಶೀಲಮ್ಮಾ ಎಷ್ಟೋತ್ತೊಂದು ದಿನ ನೀವು ರಾತ್ರಿಶಾಲೆಗೆ ಹೋಗು ಅಂತ ಹೇಳಿದ್ದಿರಿ...."

"ಹೋ! ಇಂದೇ ಬೇಕಾದರೆ ಹೋಗು. ಸ್ಲೇಟು ಪುಸ್ತಕಗಳನ್ನೆಲ್ಲ ನಾನೇ ಕೊಡುವೆನು...."

"ಅಲ್ಲಾ, ನಿಮ್ಮ ತಂದೆ-ತಾಯಿಯರ ಬಳಿ ಕೇಳಬೇಡವೇ?"

"ಅದಕ್ಕೇನು? ನಾನೇ ಅವರ ಬಳಿ ಹೇಳುವೆನು. ಅವರು ಬೇಡ ಅನ್ನಲಿಕ್ಕಿಲ್ಲ. ವಿಶ್ವಂ ಶಾಲೆಗೆ ಹೋಗುತ್ತೇನೆ ಅಂದಾಗ ಅವರು ಒಪ್ಪಿಗೆ ಕೊಟ್ಟಿದ್ದರು...."

"ಹಾಗಾದರೆ ಈಗ ಕೇಳುತ್ತೀರಾ?" ಶಿವನ್ ಉತ್ಸುಕತೆಯಿಂದ ಕೇಳಿದನು.

"ಈಗಲೇ ಕೇಳುತ್ತೇನೆ. ಆದರೆ ಒಂದು ಮಾತಿದೆ ಶಿವನ್!" ಮುಗುಳು ನಗು ಸೂಸುತ್ತಾ ಶೀಲೆ ಹೇಳಿದಳು.

"ಏನದು ಹೇಳಮ್ಮಾ?"

"ಶಿವನ್, ನನ್ನನ್ನು ಶೀಲಮ್ಮ ಎಂದು ನೀ ಕರೆಯಬಾರದು. ಶೀಲಾ ಎಂದು ಕರೆದರೆ ಸಾಕು. ನೀವು ಎಂದು ನನಗೆ ಬಹುವಚನ ಬೇಡ. ನೀನು ಎಂದು ಕರೆದರೆ ಸಾಕು...."

"ಆದರೆ ಶೀಲಮ್ಮಾ, ನೀವು ಯಾರು! ನಾನು ಯಾರು!"

"ಆಹಾಂ! ಅದೆಲ್ಲ ನಾ ಚಿಂತಿಸುವುದಿಲ್ಲ. ನನಗೆ ಬಹುವಚನ ಮಾತ್ರ ಬೇಕಾಗಿಲ್ಲ!"

ಶಿವನ್ ನಗುತ್ತ ತಲೆ ತಗ್ಗಿಸಿದನು ಶೀಲೆ ಮನೆಯೊಳಗೆ ಓಡಿದಳು. ಹೊಡೆದುಕೊಳ್ಳುವ ಎದೆಯೊಡನೆ ಶಿವನ್ ಅಲ್ಲೇ ನಿಂತನು. ಅವನ ಮನಸ್ಸಿನಲ್ಲೆಲ್ಲ ಸಂಶಯ, ಅಸಮಾಧಾನ? ಏನು ಹೇಳುತ್ತಾರೋ

ಅವರು ? ಅವನಿಗೇಕಂತೆ ಶಾಲೆ ? ಅವನಿಗೇಕೆ ಓದು-ಬರಹ ? ಎಂದು ಹಳಿಯುತ್ತಾರೇನೋ ?---ಎಂದು ಶಿವನ್ ಕಳಕಳಿಸಿದನು

ತುಸು ಹೊತ್ತಿನಲ್ಲೇ ಶೀಲೆ ಹೊರಗೆ ಬಂದು ಹೇಳಿದಳು:

" ಶಿವನ್, ಅಮ್ಮ ಕರೀತಾಳೆ. ಒಳಗೆ ಹೋಗು."

" ಏನು ಹೇಳಿದರು ಶೀಲೆ ? " ಕಾತರನಾಗಿ ಶಿವನ್ ಕೇಳಿದ.

" ಅದು ಗೊತ್ತಾಗುತ್ತದಲ್ಲ ಈಗ " ಶೀಲೆ ನಸು ನಕ್ಕಳು.

ಶಿವನಿಗೆ ಧೈರ್ಯ ಬಂದಿತು. ಅಂತೆಯೇ ಮೆಲ್ಲನೆ ಮನೆಯ ಮೆಟ್ಟಿಲನ್ನೇರಿ ಒಳಗೆ ಹೋದನು. ಸುಖಾಸನದಲ್ಲಿ ಶೀಲೆಯ ತಾಯಿ ಕುಳಿತುದು ಶಿವನಿಗೆ ಕಾಣಿಸಿತು. ಅಸ್ಥಿರತೆಯಿಂದ ಅವರ ಬಳಿಗೆ ನಡೆದನು.

" ಏನು ಶಾಲೆಗೆ ಹೋಗಬೇಕೆಂದಿದೆಯೋ ? " ಕೇಳಿದರವರು.

" ಹೂಂ "ಎಂದು ತಲೆಯಲ್ಲಾಡಿಸಿದ ಶಿವನ್.

" ಶಾಲೆಯಲ್ಲಿ ಕಲಿತು ಏನು ಮಾಡಬೇಕೆಂದಿದ್ದೀ ? " ವಿಚಾರಿಸಿದರವರು.

ಶಿವನ್ ಅದಕ್ಕೆ ಉತ್ತರ ಕೊಡಲಿಲ್ಲ. ಸುಮ್ಮನೆ ತಲೆ ತಗ್ಗಿಸಿ ನಿಂತನಷ್ಟೇ.

" ಹೂಂ ? " ಹೂಂಕಾರದಿಂದ ಪುನಃ ಪ್ರಶ್ನಿಸಿದರು ಅವರು.

" ಏನೋ ಆಶೆ...." ಶಿವನ್ ಉಸುರಿದನು.

" ಏನು ಆಶೆ? "

" ಓದಲು ಬರೆಯಲು ಕಲಿಯಬೇಕೆಂದು "

" ಒಳ್ಳೇದು " ಅಮ್ಮಾವರು ಹೇಳಿದರು " ಮತ್ತೆ ಯಜಮಾನರ ಬಳಿ ಕೇಳುತ್ತೇನೆ. ಅವರೊಪ್ಪಿದರೆ ನನ್ನ ಆಕ್ಷೇಪವೇನೂ ಇಲ್ಲ "

ಶಿವನ್ ಸಂತೋಷದಿಂದ ಹೊರಬಂದನು. ಆದರೆ ಚೆಟ್ಟಿಯಾರರು ಒಪ್ಪಿಗೆ ಕೊಡುತ್ತಾರೋ ಇಲ್ಲವೋ ಎಂದು ಅವನ ಮನದಲ್ಲಿ ಸಂಶಯವಿದ್ದೇ ಇತ್ತು.

ಚೆಟ್ಟಿಯಾರರು ಸಂಜೆ ಅವನನ್ನು ಕರೆದು ಹೇಳಿದರು:

" ನೀನು ಶಾಲೆಗೆ ಹೋಗುವುದು ನಮಗೆ ಸಂತೋಷವೇ. ಆದರೆ ವಿಷ್ಣುವಿನಂತೆ ಓಡಿಗೀಡಿ ಹೋಗಬೇಡ. ಕಲಿತು ಹುಷಾರಿಯಾದರೆ ನಾನೇ ನಿನಗೆ ಒಂದು ಒಳ್ಳೇ ಕೆಲಸ ಹುಡುಕಿ ಕೊಡುವೆನು... .... ನಿನಗೆ ಶಾಲೆಗೆ

ಬೇಕಾದ ಖರ್ಚಿಗೆ ಇಗೋ........" ಎಂದು ಐದು ರೂಪಾಯಿಗಳನ್ನೂ ಕೊಟ್ಟರು.

ಇದನ್ನೆಲ್ಲ ನೆನೆಯುತ್ತ ಶಿವನ್ ರಸ್ತೆಯುದ್ದಕ್ಕೆ ನಡೆದನು. ಶಾಲೆಗೆ ಬೇಕಾದ ಸ್ಲೇಟು ಪುಸ್ತಕಗಳನ್ನು ಶೀಲೆಯೇ ಕೊಟ್ಟಿದ್ದಳು. ಶೀಲೆ! ಎಷ್ಟು ಒಳ್ಳೆ ಹುಡುಗಿ! ಎಂತಹ ಕೋಮಲ ಮನಸ್ಸು! ಮೇಲು ಕೀಳೆಂಬ ಭೇದಭಾವವೇ ಇಲ್ಲ ಅವಳಲ್ಲಿ!.... ಚಿಂತಿಸುತ್ತಾ ಶಿವನೆದೆ ತುಂಬಿ ಬಂತು. ಕಣ್ಣು ದೃಷ್ಟಿ ಮಸುಕು ಮಸುಕಾಯಿತು. ಆದರೂ ಮುಂದೆ ಸಾಗಿದನವ.

ಬಲಪಕ್ಕದಲ್ಲಿ ಇಗರ್ಜಿ ಕಾಣಿಸಿತು. ಅವರ ವಠಾರದೊಳಗೆ, ಮೂಲೆಯಲ್ಲಿ ಒಂದು ಕಟ್ಟಡವೂ ಕಾಣಿಸಿತು. ಕಟ್ಟಡದ ಕಿಟಕಿ ಬಾಗಿಲುಗಳು ತೆರೆದಿದ್ದು, ಒಳಗಿನಿಂದ ದೀಪದ ಪ್ರಕಾಶ ಹೊರಚೆಲ್ಲಿತ್ತು. ಅದೇ ಶಾಲೆಯಾಗಿರಬೇಕೆಂದು ಊಹಿಸಿ ಶಿವನು ಅಲ್ಲಿಗೆ ನಡೆದನು.

ಒಳಗೆ ಬೆಂಚ ಮೇಲೆ ಅನೇಕ ದೊಡ್ಡ ದೊಡ್ಡ ಹುಡುಗರು ಪುಸ್ತಕ ಹಿಡಿದು ಕುಳಿತಿದ್ದರು. ಇಬ್ಬರು ಗುರುಗಳು ಮೆಲ್ಲನೆ ಅತ್ತಿಂದಿತ್ತ ತಿರುಗಾಡುತ್ತಿದ್ದರು. ಶಿವನ್ ಬಾಗಿಲಲ್ಲಿ ನಿಂತು ಎಲ್ಲವನ್ನೂ ನೋಡಿದನು.

ಶಿವನ್ ಬಂದುದು ಮುದುಕರಾದ ಒಬ್ಬರು ಗುರುಗಳಿಗೆ ಕಾಣಿಸಿತು. ಅವರು ನೇರವಾಗಿ ಶಿವನೆಡೆಗೆ ಬಂದು ಕೇಳಿದರು:

" ಓದು ಕಲಿಯಬೇಕೆಂದು ಬಂದೆಯಾ ಮಗೂ? "

ಅವರ ಸ್ವರ ಅಷ್ಟು ಕೋಮಲವಾಗಿತ್ತು. ಕರುಣಾಮಯವಾಗಿತ್ತು ಶಿವನ್ ವಿನಯದಿಂದ ಹೇಳಿದ:

" ಹೌದು "

" ನನ್ನ ಹಿಂದೆ ಬಾ " ಅಂದರವರು.

ಶಿವನ್ ಅವರ ಹಿಂದೆ ನಡೆದನು. ಕಟ್ಟಡದ ಒಂದು ತುದಿಯಲ್ಲಿ ಚಿಕ್ಕ ಕೋಣೆಯೊಂದಿತ್ತು. ಗುರುಗಳು ಅದರೊಳಗೆ ಪ್ರವೇಶಿಸಿದರು. ಶಿವನ್ ಅವರ ಹಿಂದೆ ಒಳನಡೆದನು. ಒಂದು ದೊಡ್ಡ ಪುಸ್ತಕ ತೆಗೆಯುತ್ತಾ ಗುರುಗಳು, ಕುರ್ಚಿಯಲ್ಲಿ ಕುಳಿತು ಕೇಳಿದರು:

" ನಿನ್ನ ಹೆಸರೇನು? "

" ಶಿವನ್ "

" ತಂದೆಯ ಹೆಸರು? "

" ತಂದೆಯಿಲ್ಲ...."

ಗುರುಗಳು ಚಟ್ಟನೆ ತಲೆ ನೆಗ್ಗಿ ' ಓ ' ಎಂದು ಉದ್ಗರಿಸಿ ಕೇಳಿದರು:

" ತಾಯಿ ? "

" ಅವರೂ ತೀರಿ ಹೋಗಿದ್ದಾರೆ. "

ತುಸು ಹೊತ್ತು ಸುಮ್ಮನಿದ್ದು ಗುರುಗಳು ಕೇಳಿದರು:

" ಈಗ ಎಲ್ಲಿದ್ದೀ ? "

" ಚೆಟ್ಟಿಯಾರರ ಮನೆಯಲ್ಲಿ ಕೆಲಸ ಮಾಡುತ್ತಿದ್ದೇನೆ. "

" ಯಾವ ಚೆಟ್ಟಿಯಾರರು ? "

" ಚೆಟ್ಟಿಯಾರ್ ಬ್ಯಾಂಕಿನವರು. "

" ಸರಿ, ಸರಿ !.... ಇಲ್ಲಿಗೆ ಬರಲು ನಿನಗೆ ಯಾರು ಹೇಳಿದರು ? ಚೆಟ್ಟಿಯಾರರೇ ? "

" ಅಲ್ಲ. ಶೀಲೆ ಹೇಳಿದಳು; ವಿಶ್ವಂ ಹೇಳಿದ. "

" ವಿಶ್ವಂ ಯಾರು ? "

" ಇಲ್ಲಿಯೇ ಕಲಿತವನಂತೆ. ಅಡುಗೆಯ ಸುಂದ್ರಮ್ಮನ ಮಗ. "

" ಓ ! ತಿಳಿಯಿತು, ತಿಳಿಯಿತು ! ಒಳ್ಳೇದು.... ಹೇಗೂ ಕಲಿಯ ಬೇಕೆಂಬ ಆತುರದಿಂದ ಬಂದೆಯೋ ಇಲ್ಲವೋ ? ಅಷ್ಟು ಸಾಕು. ಕಲಿತು ಒಳ್ಳೇಯವನಾಗಬೇಕು. ಸರಿ ಸರಿ ! ನನ್ನ ಹಿಂದೆ ಬಾ...."

ಕುರ್ಚಿಯಿಂದೆದ್ದು ಅವರು ಕೋಣೆಯಿಂದ ಹೊರ ಹೊರಟರು. ಶಿವನೂ ಅವರ ಹಿಂದೆ ನಡೆದನು. ಕಟ್ಟಡದ ಇನ್ನೊಂದು ತುದಿಯಲ್ಲಿ ಕರಿಹಲಗೆಯ ಮೇಲೆ ಏನೋ ಗೀಚುತ್ತ, ಎದುರಿನ ಬೆಂಚುಗಳ ಮೇಲೆ ಕುಳಿತಿದ್ದ ಹುಡುಗರಿಗೆ ಏನೋ ಹೇಳುತ್ತಿದ್ದ ಗುರುಗಳೆಡೆಗೆ ನಡೆದು, ಅಲ್ಲಿದ್ದ ಬೆಂಚನ್ನು ತೋರಿಸುತ್ತ ಹೇಳಿದರು:

" ಇಲ್ಲಿ ಕುಳಿತುಕೋ. "

" ಇವನು ಹೊಸಬ. ಇವನಿಗೆ ಅಕ್ಷರಾಭ್ಯಾಸ ಆರಂಭಿಸಿರಿ " ಎಂದು ಹೇಳಿ ಮುಮುಕ ಗುರುಗಳು ಬೇರೆ ಕಡೆಗೆ ಹೋದರು

ಹೊಸ ಗುರುಗಳು ಶಿವನೆಡೆಗೆ ಬಂದು ಅವನ ಪಕ್ಕದಲ್ಲಿ ಕುಳಿತು ಕೊಂಡರು. ಅವನ ಸ್ಲೇಟಿನ ಮೇಲೆ ಮೊದಲ ಎರಡಕ್ಷರಗಳನ್ನು ಬರೆದು ಅದನ್ನು ಉಚ್ಚರಿಸಿದರು. ಉಚ್ಚಾರ ಹೇಳುತ್ತಾ ಆ ಅಕ್ಷರಗಳ ಮೇಲೇ ಹತ್ತಾರು ಬಾರಿ ಬರೆದು, ಸ್ವತಂತ್ರವಾಗಿ ಬರೆಯಲು ಕಲಿ ಅಂದರು.

ಶಿವನ್ ಹಾಗೇ ಮಾಡಿದನು. ಅಕ್ಷರಗಳ ಪರಿಚಯ ವನ್ನು ಅವನೊಂದು ದಿನವಲ್ಲೇ ಮಾಡಿಕೊಂಡನು.

ಹತ್ತು ಗಂಟೆಗೆ ಶಾಲೆ ಬಿಟ್ಟಿತು ಎಲ್ಲರೂ ಹೊರಟು ಹೋದರು ಶಿವನೂ ಮನೆಗೆ ಹೊರಟನು ಆಗ ಮುದುಕ ಗುರುಗಳು ಅವನ ಬಳಿಗೆ ಬಂದು ಮೆಚ್ಚುಗೆಯಿಂದ ಅವನ ಬೆನ್ನು ತಟ್ಟುತ್ತಾ ಅಂದರು:

" ಒಂದು ದಿನದಲ್ಲೇ ನೀನು ತುಂಬಾ ಕಲಿತು ಬಿಟ್ಟೆ ನಿನ್ನ ಹಾಗೆ ಉತ್ಸಾಹದಿಂದ ಇಲ್ಲಿಗೆ ಬರುವವರೆಷ್ಟೋ ಮಂದಿ ಆದರೆ ಒಂದೆರಡು ದಿನ ಬಂದು ಮತ್ತೆ ಇಲ್ಲಿಗೆ ಬರುವುದಿಲ್ಲ. ನೀನು ಮಾತ್ರ ಹಾಗೆ ಮಾಡಬೇಡ ದೇವರು ನಿನಗೆ ಸದ್ಬುದ್ಧಿಯನ್ನು ಕರುಣಿಸಲಿ "

ಶಿವನ್ ಮನೆಗೆ ಬಂದನು. ಕಿರಣಸಿಂಗನನ್ನು ಎಬ್ಬಿಸಿ, ಗೇಟನ್ನು ತೆರೆದು ತನ್ನ ಕೋಣೆಯನ್ನು ಸೇರಿದನು. ಸುಂದ್ರಮ್ಮನನ್ನು ಎಬ್ಬಿಸಿ ಊಟ ತೀರಿಸಿಕೊಂಡನು. ಪುನಃ ಕೋಣೆಗೆ ಬಂದು ಬೆಂಚ ಮೇಲೆ ಒರಗಿಕೊಂಡನು.

ಕಾರ್‌ಷೆಡ್ಡಿನಾಚೆಯಿಂದ ಅವನಿಗೆ ಕೂಗು ಕೇಳಿಸಿತು.

" ಶಿವನ್, ಓ ಶಿವನ್ ! "

ಶಿವನ್ ಚಟ್ಟನೆದ್ದು ಹೊರಬಂದನು. ಕೂಗಿದುದು ಶೀಲೆ. ಅವಳು ತನ್ನ ಕೋಣೆಯ ಕಿಟಕಿಯ ಬಳಿ ನಿಂತುಕೊಂಡಿದ್ದಳು ಶಿವನ್ ಹೊರ ಬಂದ ಕೂಡಲೆ ಕೇಳಿದಳು:

" ಶಿವನ್ ಶಾಲೆಗೆ ಹೋಗಿದ್ದೆಯಾ ? "

" ಹಾಂ! ಹೋಗಿದ್ದೆ." ಶಿವನಂದನು. ಮಾತ್ರವಲ್ಲ ಅಲ್ಲಿಯ ತನ್ನ ಸಾಹಸಗಳನ್ನೆಲ್ಲ ಬಣ್ಣಿಸಿದನು. ಉತ್ಸಾಹದಿಂದ, ಸಂತೋಷದಿಂದ ನಡೆದುದನ್ನೆಲ್ಲವನ್ನು ವಿವರಿಸಿದನು. ತಾನು ಆ ದಿನದಲ್ಲಿ ಕಲಿತ ವಿಷಯಗಳನ್ನು ಹೇಳಿದನು

" ಅಬ್ಬಬ್ಬ ! ಒಂದೇ ದಿನದಲ್ಲಿ ಎಷ್ಟು ಕಲಿತು ಬಿಟ್ಟೆಯೋ ? " ಎಂದು ಶೀಲೆ ಉದ್ಗರಿಸಿದಳು. ಅವಳಿಗೆಷ್ಟು ಆನಂದವಾಗಿತ್ತು ! ಶಿವನ್ ಕಲಿಯುತ್ತಾನೆ. ಕಲಿತು ಹುಷಾರಾಗುತ್ತಾನೆ. ತನ್ನನ್ನುಳಿಸಿದ ಶಿವನ್ ಚತುರನಾಗುತ್ತಾನೆ !

" ಶಿವನ್, ನೀನು ಸ್ವಲ್ಪ ಸಮಯದೊಳಗೇ ನನ್ನ ಕಿಂತಲೂ ಹೆಚ್ಚು ಕಲಿತು ಬಿಡುತ್ತೀ ! " ಶೀಲೆ ಉಬ್ಬಿ ಹೇಳಿದಳು.

"ಓ! ನಿನ್ನಷ್ಟು ನಾ ಕಲಿಯಲಿಕ್ಕುಂಟೇ? ನೀನು ದೊಡ್ಡ ಪುಸ್ತಕಗಳನ್ನು ಓದುತ್ತೀ" ಶಿವನು ಕಣ್ಣರಳಿಸಿದನು.

"ಖಂಡಿತ ಕಲಿಯುವಿ. ಇನ್ನೊಮ್ಮೆ ಇಂದು ಕಲಿತ ಅಕ್ಷರಗಳನ್ನೆಲ್ಲ ಬರೆದು ಅಭ್ಯಾಸ ಮಾಡು. ಮರೆತು ಗಿರತು ಹೋಗಬಾರದಲ್ಲಾ!"

"ಹೌದು ಹತ್ತುಸಲ ಬರೆಯುವೆನು" ಎಂದೆನ್ನುತ್ತಾ ಶಿವನ್ ತನ್ನ ಕೋಣೆಗೆ ಹೋದನು. ಸ್ಲೇಟನ್ನು ಹಿಡಕೊಂಡು ಕಡ್ಡಿಯಿಂದ ತಾನು ಕಲಿತುದನ್ನೆಲ್ಲ ಪುನಃ ಪುನಃ ಬರೆದನು. ಕಣ್ಣುಗಳ ರೆಪ್ಪೆಯು ನಿದ್ರೆಯಿಂದ ಭಾರವಾಗುವ ತನಕ ಬರೆದನು. ಅನಂತರ ದೀಪ ನಂದಿಸಿ ಮಲಗಿದನು.

ಶಿವನಿಗೆ ಸುಖನಿದ್ದೆ ಹತ್ತಿತೇ? ... ಬಹುಶಃ ಇಲ್ಲವೇನೋ. ಒಂದು ವಿಲಕ್ಷಣ ಸ್ವಪ್ನವು ಅವನ ನಿದ್ರೆಯನ್ನು ಕೆಡಿಸಿತು. ವಿಶಾಲವಾದ ಮರುಭೂಮಿ. ದಶದಿಕ್ಕುಗಳಲ್ಲೂ ಕಣ್ಣಿಗೆಟಕುವಷ್ಟು ದೂರಕ್ಕೆ ಮರಳ ರಾಶಿಯು ಹರಡಿದೆ ಬಿಸಿಲು ಜಳಜಳನೆ ಹೊಡೆಯುತ್ತಿದೆ. ಮರಳು ಕಾದು ಉರಿಯುತ್ತಿದೆ ಆಕಾಶದಲ್ಲಿಯೂ, ಸುತ್ತಲೆಲ್ಲೆಲ್ಲಿಯೂ ಜೀವ ಜಂತುಗಳ ಸುಳಿವಿಲ್ಲ ಶಿವನ್ ದಿಕ್ಕುಗಾಣದೆ ಸುಡುವ ಮರಳ ಮೇಲೆ ನಿಂತಿದ್ದಾನೆ. ಸಹಿಸಲಸಾಧ್ಯವಾದ ದಾಹದಿಂದ ಕಂಗೆಟ್ಟು ಹೋಗಿದ್ದಾನೆ. 'ನೀರು ನೀರು' ಎಂದು ಶಿವನ್ ಕೂಗಿದ, ಆದರೆ ಒಣಗಿ ಹೋದ ಅವನ ಗಂಟಲಿನಿಂದ ಶಬ್ದಗಳೇ ಹೊರಬರಲಿಲ್ಲ. ಸುಡುಗಾಳಿಯು ಮಾತ್ರ ಬೀಸಿ, ಮರಳನ್ನು ಅವನ ಕಣ್ಣುಗಳ ಮೇಲೆ ಚೆಲ್ಲಿತು. ಕಣ್ಣುಗಳನ್ನು ಜಜ್ಜುತ್ತಾ ಶಿವನ್ ದೂರದ ದಿಗಂತವನ್ನು ನೋಡಿದ. ದಿಗಂತದಲ್ಲಿ ಒಬ್ಬಳು ಹೆಂಗುಸಿನ ಆಕಾರವು ಬಾನಿಗೆ ಹಬ್ಬಿದಂತೆ ಕಾಣಿಸಿತು. ತುಸು ಹೊತ್ತಿನಲ್ಲಿ ಆ ಹೆಂಗುಸಿನ ಆಕಾರವು ಶೀಲೆಯ ರೂಪವನ್ನು ತಾಳಿತು. ಉತ್ಸಾಹದಿಂದ, ಆಶೆಯಿಂದ ಶಿವನ್ 'ಶೀಲೆ! ನೀರು ನೀರು' ಎಂದು ಕೂಗಿದನು. ಶೀಲೆ 'ಇಲ್ಲಿಗೆ ಬಾ, ನನ್ನ ಬಳಿಯಲ್ಲಿ ನೀರಿದೆ ಓಡಿ ಬಾ' ಅಂದಳು. ಮುಗ್ಗರಿಸಿ ಮುಗ್ಗರಿಸಿ, ಎದ್ದು ಬಿದ್ದು ತನ್ನೆಲ್ಲ ಶಕ್ತಿಯನ್ನು ಪಯೋಗಿಸಿಕೊಂಡು ಶಿವನೋಡಿದನು. ದಿಗಂತದಲ್ಲಿನ ಶೀಲೆಯ ರೂಪ ಮಾಯವಾಯಿತು. ಆದರೆ ಶಿವನೆದುರಿಗೆ ಒಂದು ಜಲಾಶ್ರಯವು ಬಂತು. ಹಸುರಾದ ಮರಗಳ ನಡುವೆ, ಚಿಕ್ಕ ಕುಂಟೆ

ಯಿದ್ದಿತು ತಿಳಿನೀರು ಸೂರ್ಯರಶ್ಮಿಗೆ ಹೊಳೆಯುತ್ತಿತ್ತು. ಆತುರದಿಂದ ಶಿವನು ಮೊಣಕಾಲೂರಿ ನೀರಿಗೆ ಮುಖ ಚಾಚಿದನು. ಆದರೆ ಬರೀ ಮರಳು ಅವನ ಬಾಯಿಗೆ ತಾಗಿತಷ್ಟೇ ನೀರು ಸಿಗಲಿಲ್ಲ. ' ಶೀಲೇ ! ಶೀಲೇ ! ' ಎಂದು ಶಿವನ್ ಎದೆಯೊಡೆದು ಕೂಗಾಡಿದ ಉತ್ತರರೂಪವಾಗಿ ತಕ್ಷಣ ಕಗ್ಗತ್ತಲೆ ಕವಿದುಕೊಂಡಿತು. ಅಟ್ಟಹಾಸದ ವಿಲಕ್ಷಣ ನಗು ಕಿವಿಗಳಲ್ಲಿ ತುಂಬಿಕೊಂಡಿತು.

ಶಿವನಿಗೆ ಆಗ ಎಚ್ಚರವಾಯಿತು.

---

## ೧೦

ಶಿವನೀಗ ಮೊದಲಿನ ಶಿವನಲ್ಲ. ಗತಿಗೋತ್ರವಿಲ್ಲದೆ ಮದರಾಸಿನ ಸಿಕ್ಕ ಸಿಕ್ಕ ಬೀದಿಗಳಲ್ಲಿ ಅಥವಾ ಅಸಹ್ಯ ಕೊಳಕಿನಿಂದ ತುಂಬಿದ ಯಾವದಾದರೊಂದು ಕೊಂಪೆಯಲ್ಲಿ ವಾಸಿಸಬಹುದಾಗಿದ್ದ ಅರೆಬತ್ತಲೆ ಪೋರನಲ್ಲ. ಯಾವುದೋ ಕಾಣದ ಕೈಯೊಂದು ನಾಗರಿಕ ಪ್ರಪಂಚದ ಆ ಅನಾಗರಿಕ ಲೋಕದಿಂದ ಹೊರದೂಡಿತು. ಅವನ ಬದುಕಿಗೆ ಒಂದು ನಿರ್ದಿಷ್ಟ ರೂಪವನ್ನು ಕೊಟ್ಟಿದೆ. ದಿನದಿನಕ್ಕೆ ಅವನು ಒಂದೊಂದೇ ಹೆಜ್ಜೆ ಮುಂದೆ ಇಡುತ್ತಿದ್ದಾನೆ. ನಿಸರ್ಗ ಅನುಕೂಲ ಪರಿಸ್ಥಿತಿಗಳನ್ನು ಅವನ ಬದುಕಿನ ದಾರಿಯಲ್ಲೊಡ್ಡಿ, ಅವನ ಬಗ್ಗೆ ಅದೇಕೋ ಅತ್ಯಂತ ಸಹಾನುಭೂತಿಯನ್ನು ತೋರಿಸಿದೆ

“ ಶಿವನ್ ! ” ಶೀಲೆ ಕಿಟಕಿಯ ಬಳಿ ನಿಂತು ಕೂಗಿದಳು.

ತನ್ನ ಯೋಚನಾ ಪ್ರಪಂಚವನ್ನು ಬಿಟ್ಟು, ತಟ್ಟನೆ ಕೋಣೆಯಿಂದ ಹೊರಗೆ ಬಂದು ಶಿವನ್ ಕೇಳಿದನು.

“ ಕರೆದೆಯಾ ಶೀಲಾ ? ”

“ ಹೌದು ” ಶೀಲೆ ಹೇಳಿದಳು “ ನಿನ್ನ ಕೋಣೆಯಿಂದ ಬೆಳಕು ಕಾಣಿಸಿತು. ಶಾಲೆಗೆ ಹೋಗಿಲ್ಲವೇಕೆ ಎಂದು ತಿಳಿಯೋಣವೆಂದು ಕರೆ

ದೆನು. ”

“ ನಾ ಶಾಲೆಗೆ ಹೋಗಿದ್ದೆ. ಆದರೆ ನಮ್ಮ ಗುರುಗಳಿಗೆ ಸೌಖ್ಯವಿಲ್ಲ. ಹಾಗೇ ಹಿಂದೆ ಬಂದೆನು....’’ ಶಿವನ್ ಅಂದನು. ಅವನ ಸ್ವರವೇಕೋ ಕಂಪಿಸಿತು.

“ ಅಷ್ಟು ತಿಳಿಯಲು ಕರೆದೆನಷ್ಟೆ. ನನಗೆ ಮುಂದಿನವಾರ ಪರೀಕ್ಷೆ. ಓದಲಿದೆ ” ಅನ್ನುತ್ತ ಶೀಲೆ ಹೋದಳು.

ಶಿವನ್ ಭಾರವಾದ ಹೆಜ್ಜೆಗಳನ್ನಿಡುತ್ತಾ ತನ್ನ ಕೋಣೆಗೆ ಹಿಂತಿರುಗಿದನು. ಹಾಗೆಯೇ ಮೆಲ್ಲನೆ ಬೆಂಚಮೇಲೆ ಒರಗಿಕೊಂಡನು.

“ ಶಿವನ್ !.... ನೀನು ಯಾವ ಜನರ ಮಧ್ಯದಲ್ಲಿ, ಯಾವ ಲೋಕದಲ್ಲಿ ಹುಟ್ಟಿದೆಯೋ ಅವರನ್ನು ಮರೆಯಬೇಡ ಶಿವನ್ !.... ನಾವು ಅಂಥವರ ಉದ್ಧಾರಕ್ಕಾಗಿ ವ್ಯೆ ಸವೆಸುತ್ತೇವೆ. ನೀನು ನಿನ್ನ ಜನರ ಉದ್ಧಾರ ಮಾಡಬೇಕು ... ಅದಕ್ಕಾಗಿ ದುಡಿಯಬೇಕು....’’ ಗಂಭೀರವಾದ ಆವೇಶದಿಂದ ಕಂಪಿಸುವ ಆದರೂ ಬಹು ಮಧುರವಾದ ನುಡಿಗಳು ಶಿವನಿಗೆ ಪುನಃ ಕೇಳಿಸಿದಂತಾಯಿತು. ಶೀಲೆ— ನೀನೇಕೆ ಶಾಲೆಗೆ ಹೋಗಲಿಲ್ಲ ಎಂದು ಕೇಳಿದಾಗ, ಅದೇ ಒಂದು ಗಂಟೆಯ ಹಿಂದೆ ನಡೆದ ಮಾತುಕತೆಯು ನೆನಪಿಗೆ ಬಂದಿತು.

ಮಾತನಾಡಿದುದು ಅಸ್ವಸ್ಥತೆಯಿಂದ ಹಾಸುಗೆ ಹಿಡಿದ ಫಾದರ್ ಎಂಟನಿ ಅವರೊಡನೆ.

ಶಿವನಿಗೆ ತಿಳಿದಂತೆ ಫಾದರ್ ಎಂಟನಿ ಇಟಲಿ ದೇಶದವರು. ಚಿಕ್ಕಂದಿನಲ್ಲೇ ಜಗತ್ತಿನಲ್ಲಿ ನಡೆಯುವ ಅನ್ಯಾಯ, ಅನಾಚಾರಗಳಿಗೆ ರೋಸಿಹೋಗಿ, ಗುರುಗಳ ಪಂಕ್ತಿಯೊಳಗೆ ಸೇರಿಕೊಂಡರು. ಕ್ರೈಸ್ತ ಮತ ಪ್ರಚಾರಕ್ಕಾಗಿ ಇಟಲಿಯಿಂದ ಹಿಂದುಸ್ಥಾನಕ್ಕೆ ತಾರುಣ್ಯದಲ್ಲೇ ಬಂದರು. ಈಗ ಜೀವನದ ಸಂಧ್ಯಾಕಾಲವನ್ನು ಸಮೀಪಿಸಿದ್ದಾರೆ. ಜೀವನವನ್ನಿಡೀ ಹಳ್ಳಿಪಳ್ಳಿಗಳನ್ನು ಸುತ್ತುತ್ತಾ ಕಳೆದಿದ್ದಾರೆ. ಭಾರತದ ಎಲ್ಲಾ ಭಾಷೆಗಳನ್ನು ಅವರು ಅಭ್ಯಸಿಸಿದ್ದಾರೆ. ಎಲ್ಲಾ ಮತಗಳ ತತ್ವಗಳನ್ನು ಸಹಾನುಭೂತಿಯಿಂದ ಅರಿತುಕೊಂಡಿದ್ದಾರೆ. ಅಂತಲೇ ಅವರ ಹೃದಯ ಅನುಭವ ಪೂರ್ಣವಾಗಿ ವಿಶಾಲವಾಗಿದೆ. ಆತ್ಮದ ತೇಜಸ್ಸು, ಅವರ ಪುಣ್ಯಪೂರ್ಣ ನಡತೆಯೊಡನೆ ಒಂದು ಭವ್ಯ ವ್ಯಕ್ತಿತ್ವವನ್ನು ಅವರಲ್ಲಿ ತುಂಬಿಸಿದೆ. ಅವರ ಸಾಮೀಪ್ಯಕ್ಕೆ ಬಂದವರು ಆ ವ್ಯಕ್ತಿತ್ವವನ್ನು ಕಂಡು

ಬೆರಗಾಗದೆ ಇರುವುದಿಲ್ಲ

ತೀರ ಮುದುಕರಾದರೂ ಫಾ. ಎಂಟಸಿ ಸುಮ್ಮನೆ ಕುಳಿತುಕೊಳ್ಳುವುದಿಲ್ಲ. ಈ ದೇಶಕ್ಕೆ ಕಾಲಿರಿಸಿದ ದಿನವೇ ತನ್ನ ಕಣ್ಣುಗಳಿಗೆ ಹೊಡೆದುದು ಕಡು ಬಡತನ ಮತ್ತು ವಿದ್ಯಾ ವಿಹೀನತೆ ಅನ್ನುತ್ತಾರೆ ಫಾ. ಎಂಟಸಿ. ಈ ಬಡತನದ ಈ ವಿದ್ಯಾ ವಿಹೀನತೆಯ ನಿರ್ಮೂಲನಕ್ಕೆ, ಅವರು ಮತ ಪ್ರಚಾರಕ್ಕಿಂತ, ಹೆಚ್ಚು ಆಸಕ್ತಿ ತೋರಿಸಿದ್ದಾರೆ ಆಸಕ್ತಿ ತೋರಿಸಿದ್ದೇ ಮಾತ್ರವಲ್ಲ, ಹೋದಹೋದಲ್ಲಿ ಅವರು ಅಂತಃಕರಣ ಪೂರ್ವಕವಾಗಿ ಕಾರ್ಯರಂಗಕ್ಕಿಳಿದಿದ್ದಾರೆ ಶಾಲೆ ತೆರೆದಿದ್ದಾರೆ. ವಿದ್ಯಾಪ್ರಸಾರ ಮಾಡಿದ್ದಾರೆ. ಮೈದುಡಿದು ಕೆಲಸ ಮಾಡಿದ್ದಾರೆ ಇವರ ನಿಸ್ವಾರ್ಥ ಸೇವೆಗೆ ಎಷ್ಟೋ ಜನ ಅಪಾರ್ಥ ಕಟ್ಟಿಕೊಂಡವರೂ ಇದ್ದಾರೆ. ಆದರೆ ಅಂಥವರು ತನ್ನನ್ನು ನಿಂದಿಸಿದಾಗ ಎಂಟಸಿ ತನ್ನ ನಗುಮುಖವನ್ನು ತೋರಿಸಿದ್ದರಷ್ಟೆ, ಅವರಿಗೆ ಮರುತ್ತರವನ್ನು ಕೊಡಲಿಲ್ಲ. ಒಂದು ಕೆನ್ನೆಗೆ ಪೆಟ್ಟು ಬಿದ್ದಾಗ ಇನ್ನೊಂದು ಕೆನ್ನೆಯನ್ನು ತೋರಿದರೇ ವಿನಹ ತಮ್ಮ ದೇಹಬಲದ ಪ್ರದರ್ಶನಕ್ಕಿಳಿಯಲಿಲ್ಲ. ಆದರೆ ಅವರ ಆತ್ಮದ ಮಹತ್ತಾದ ಶಕ್ತಿಯೆದುರಿಗೆ ಅಂತಹವರಾರಿಗೂ ತಲೆಯೆತ್ತಿ ನಿಲ್ಲಲಾಗಲಿಲ್ಲ.

ಇದೀಗ, ತೀರ ಮುದುಕರಾಗಿ, ಅಶಕ್ತತೆಯಿಂದ ನಡೆದಾಗಲೂ ಕಷ್ಟವೆನಿಸಿದಾಗ ಅವರು ಹಳ್ಳಿಯನ್ನು ಬಿಟ್ಟು ಮದರಾಸನ್ನು ಸೇರಿದ್ದರು. ಇಲ್ಲಿಯೂ ಅವರು ಸುಮ್ಮನೆ ಕಾಲಹರಣ ಮಾಡಲಾರರು. ಇಲ್ಲಿಯೂ ಬಡತನ ಅವರ ಕಣ್ಣುಗಳಿಗೆ ಹೊಡೆಯುತ್ತದೆ. ಸಮೃದ್ಧವಾಗಿ ಕಾಣುವ ಸುಸಂಸ್ಕೃತ ಪಟ್ಟಣದಲ್ಲೂ ಬೀದಿ ಬೀದಿಗಳಲ್ಲಿ ನಿರ್ಗತಿಕರು ತೊಳಲಾಡುತ್ತಿದ್ದಾರೆ. ಈ ಬಡತನಕ್ಕೆ ವಿದ್ಯಾ ವಿಹೀನತೆಯೇ ಮೂಲಕಾರಣ ಎಂದು ಫಾ. ಎಂಟಸಿಯವರ ಖಚಿತಾಭಿಪ್ರಾಯ. ಜನ ವಿದ್ಯಾವಂತರಾದರೆ ಈ ಆರ್ಥಿಕ ವಿಷಮತೆ ತನ್ನಷ್ಟಕ್ಕೆ ತಾನೇ ಬಗೆಹರಿದೀತೆಂದು ಹೇಳುತ್ತಾರವರು.

ಭಾರತದಲ್ಲಿ ತಾನು ಕಂಡುದನ್ನು, ತಾನು ಅನುಭವಿಸಿದುದನ್ನು 'ದೇವರ ಸಾಮ್ರಾಜ್ಯ' ಎಂಬ ಗ್ರಂಥದಲ್ಲಿ ಅವರು ಬರೆದಿದ್ದಾರೆ. ಶಿವನ್ ಅದನ್ನೋದಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದನು. ಆದರೆ ಅದರಲ್ಲಿ ಬರೆದುದನ್ನೆಲ್ಲ ಅರ್ಥ ಮಾಡಿಕೊಳ್ಳಲು ಅವನಿಂದಾಗಿರಲಿಲ್ಲ.

ಆದರೆ ಮದರಾಸು ಪಟ್ಟಣದ ಬಗ್ಗೆ ಅವರು ಬರೆದ ಪ್ರಕರಣವು ಅವನ ಮನದಲ್ಲಿ ಅಚ್ಚಳಿಯದಂತೆ ನಿಂತಿತ್ತು. ಏಕೆಂದರೆ ಅವರು ಬರೆದುದು ಶಿವನ್ ಬಾಲ್ಯದಲ್ಲಿ ಕಂಡ, ಅನುಭವಿಸಿದ ಜೀವನದ ಚಿತ್ರವೇ ಆಗಿತ್ತು. ಶಿವನಿಗೆ, ಅವರು ಬರೆದ ಆ ಭಾಗ ಮರೆಯುವಂತೆಯೇ ಇರಲಿಲ್ಲ. ಅವರು ಬರೆದಿದ್ದರು:

'ಹಿಂದುಗಳ ದೇವರ ಹೆಸರು ಸೂಚಿಸಿ ಹೇಳುವದಿದ್ದರೆ, ದರಿದ್ರ ನಾರಾಯಣನು ಆ ದೇಶವನ್ನು ಆಳುತ್ತಿದ್ದಾನೆ ಎಂದು ಅನ್ನಬಹುದು. ದೇಶದ ಮೂಲೆ ಮೂಲೆಯಲ್ಲಿ, ಹಳ್ಳಿಪಳ್ಳಿಗಳಲ್ಲಿ ದಾರಿದ್ರ್ಯದ ತಾಂಡವ ನೃತ್ಯ ಸತತವಾಗಿ ನಡೆದಿದೆ. ಎತ್ತ ನೋಡಿದತ್ತ ಕಾಣುವದು ಈ ಘೋರ ನರ್ತನವೇ ಎಂದು ಹಿಂದಿನ ಅಧ್ಯಾಯಗಳನ್ನು ಓದಿದ ವಾಚಕರಿಗೆ ಈಗಲೇ ಅರಿವಾಗಿರಬಹುದು. ಈಗ ಮದರಾಸು ಪಟ್ಟಣವನ್ನು ಪರಿಶೀಲಿಸೋಣ. ದೇವರ ಕರೆಯನ್ನು ಕಾಯುತ್ತಾ ನಾನೇ ಪಟ್ಟಣವನ್ನು ಪ್ರವೇಶಿಸಿದೆನು. ಎಂದು ಹಿಂದಿನ ಅಧ್ಯಾಯದಲ್ಲಿ ಹೇಳಿದ್ದೆ. ಪ್ರವೇಶಿಸಿದವನೇ ನಗರದ ಸುತ್ತಮುತ್ತ ತಿರುಗಿ, ಜನಜೀವನದ ಪರೀಕ್ಷೆಯನ್ನು ನಡೆಸಿದೆನು. ಮದರಾಸು ಪಟ್ಟಣಕ್ಕೆ ನಾನೀ ಮೊದಲು ಮೂರುನಾಲ್ಕು ಬಾರಿ ಬಂದಿದ್ದೆನು. ಆಗ ನನಗೆ ಕಾಣಿಸಿದುದು ಹೊರಗಿನ ಥಳಕು. ಒಳಗಿನ ಹುಳುಕು ನಾ ನೋಡಿರಲಿಲ್ಲ. ನನಗೆ ಕಂಡುದು ಸಿರಿತನದ ಆಡಂಬರ. ದುಃಖಾತೀತವಾದ ಸೊಗಸು. ತಮ್ಮತಮ್ಮ ಕೆಲಸಗಳಲ್ಲಿ ಮಗ್ನರಾದ ಜನ ಸಮುದಾಯ ಆದರೆ ಈಗ, ಇಲ್ಲಿಯೇ ನೆಲೆಸಿ ಜನಜೀವನವನ್ನು ನಿರೀಕ್ಷಿಸಿದಾಗ ಉಗ್ರ ಬಡತನದ ಕರಾಳರೂಪ ನನ್ನ ಕಣ್ಣುಗಳನ್ನು ಕಟ್ಟಿಸಿತು. ನವನಾಗರಿಕತೆಯ ವೇಷಭೂಷಿತರಾದವರೂ ಕೈಗೆ ಬಾಯಿಗೆ ಬರುವಷ್ಟು ಸಂಪಾದಿಸುವುದಿಲ್ಲ ಎಂದು ನನಗೆ ತಿಳಿದು ಬಂದಿತು. ಭಾರತದ ಎಲ್ಲೆಡೆಗಳಲ್ಲಿ ಇರುವಂತೆ ಸಿರಿತನ, ಐಶ್ವರ್ಯ, ಕೇವಲ ಕೆಲವರದೇ ಸೊತ್ತೆಂಬುದು ಈ ವಿಶಾಲವಾದ ಸ್ವಚ್ಛ ನಗರಕ್ಕೂ ಹೊರತಾದುದಲ್ಲ.

'ಕೈಗೆ ಬಾಯಿಗೆ ಬರುವಷ್ಟು ಸಂಪಾದಿಸುವುದಿಲ್ಲ ಎಂದು ಬಹುಸಂಖ್ಯಾಕರಾದ ಮಧ್ಯಮ ವರ್ಗದವರ ಬಗ್ಗೆ ಹೇಳಿದೆ. ಇನ್ನು ತೀರ ಬಡವರಾದವರನ್ನು ಪರಿಚಯ ಮಾಡಿಸಿಕೊಡುತ್ತೇನೆ. ತೀರ ಬಡಜನರು ಎಂದು ಬರೆಯುವಾಗಲೇ ನನ್ನ ಕೈ ಎಷ್ಟು ನಡುಗುತ್ತದೆ. ಮನವೆಷ್ಟು

ಕುಗ್ಗುತ್ತದೆ, ಹೃದಯವೆಷ್ಟು ಅಸ್ಥಿರತೆಯಿಂದ ಕಳವಳಗೊಳ್ಳುತ್ತದೆ ಎಂದು ಹೇಳಲಾರೆ. ಕರುಣಾಳುವಾದ ದೇವರಲ್ಲಿ. ನನಗಿದನ್ನು ನಿಮಗೆ ತಿಳುಹಿಸಲು ಶಕ್ತಿಯನ್ನು ಕೊಡು ಎಂದು ಪ್ರಾರ್ಥಿಸುತ್ತೇನೆ. ದಯಾಳುವಾದ ಭಗವಂತನಲ್ಲಿ, ಈ ಬಡವರಿಗೆ ಕರುಣೆದೋರು ಎಂದು ಮೊರೆಯಿಡುತ್ತೇನೆ. ತನ್ನನ್ನು ಶಿಲುಬೆಗೇರಿಸಿದಾಗ 'ತಂದೆ! ಅವರನ್ನು ಕ್ಷಮಿಸು!' ಎಂದು ಪ್ರಾರ್ಥಿಸಿದ ಯೇಸುದೇವನಂತೆ, ಇವರನ್ನು ನೆನೆಯುವಾಗ 'ದೇವಾ! ಇವರೆಂತಹ ಪಾಪವನ್ನೇ ಮಾಡಿರಲಿ, ಈ ತೆರದ ಬನ್ನವನ್ನು ಕೊಡಬೇಡ, ಇವರನ್ನು ಕ್ಷಮಿಸು' ಎಂದು ಕೇಳಿಕೊಳ್ಳುತ್ತೇನೆ.

'ಬಡತನದ ಪರಾಕಾಷ್ಠತೆಯನ್ನು ಈ ಪಟ್ಟಣದಲ್ಲಿ ನೋಡಬಹುದು, ಒಂದು ಹರಕು, ಹೊಲಸು ಬಟ್ಟೆಯಿಂದ ಮೈಯನ್ನು ಹೇಗೋ ಅರ್ಧ ಮುಚ್ಚಿಕೊಂಡು ಜೀವನ ಸಾಗಿಸುವ ಜನರ ಸಂಖ್ಯೆ ಕಡಿಮೆಯಿಲ್ಲ, ಸರಿಯಾದ ಆಹಾರ ಆರೈಕೆಗಳಿಲ್ಲದೆ, ಬಿಸಿಲು ಮಳೆಗೆ ಮೈಯೊಡ್ಡಿ ತೀರ ಕಪ್ಪಗಾದ, ಒಣಗಿ ಕಡ್ಡಿಯಾದಂಥಾ ಬಾಲಕರು ದಾರಿಹೋಕರನ್ನು ಕಾಡಿಸುವದು ಸಾಮಾನ್ಯವಾದ ಅನುಭವವಾಗಿದೆ. ಇದ್ದ ಒಂದೆರಡು ಕುಡಿಕೆ ಮಡಿಕೆಗಳೊಡನೆ ಮಕ್ಕಳು ಮರಿಗಳನ್ನು ಕಟ್ಟಿಕೊಂಡು, ಅರೆಬತ್ತಲೆಯಾಗಿ ಓಣಿಗಳನ್ನೇ ಮನೆಗಳನ್ನಾಗಿಮಾರ್ಪಡಿಸಿಕೊಂಡ ಸ್ತ್ರೀಯರು,ಹೃದಯದ ಕೋಮಲ ಭಾವನೆಗಳನ್ನು ಕೆರಳಿಸುವ ದೃಶ್ಯ ಪರಂಪರೆಗಳಾಗಿದ್ದಾರೆ. ಇವರ ಗಂಡಸರೂ ಹಾಗೇನೇ, ಅವರ ಕಸಬು ರಿಕ್ಷಾ ಎಳೆಯುವುದು, ಕೈಬಂಡಿ ಎಳೆಯುವುದು. ಉರಿಬಿಸಿಲಲ್ಲಿ, ಸುಡುವ ಸಿಮೆಂಟಿನ ರಸ್ತೆಯಲ್ಲಿ ಬರಿಗಾಲಿನಿಂದ ಇವರು ಮನುಷ್ಯರನ್ನೆಳೆದುಕೊಂಡು ಹೋಗುವುದೂ, ಭಾರವಾದ ಸಾಮಾನುಗಳನ್ನು ಬಂಡಿಯಲ್ಲಿಟ್ಟು ಎಳೆದೊಯ್ಯುವದೂ ಕರುಣಾಜನಕ ವಿಷಯಗಳು. ಈ ಅಮಾನುಷ ಕೆಲಸಗಳಲ್ಲಿ ಬೆವರು ಸುರಿಸಿದರೂ ಅವರಿಗೆ ಸಿಕ್ಕುವ ಹಣ ಅಷ್ಟೇನೆ. ಅವರ ಜೀವನ ಮಟ್ಟ ಏನೇನೂ ಸುಧಾರಿಸುವುದಿಲ್ಲ. ಅವರ ಆರ್ಥಿಕ ದುಃಸ್ಥಿತಿ ಏನೇನೂ ಕಡಿಮೆಯಾಗುವುದಿಲ್ಲ.

'ಇವರಲ್ಲಿ ಹೆಚ್ಚಿನವರಿಗೆ ಬೀದಿಯೇ ಮನೆ. ಬೀದಿಯ ಪಕ್ಕದ ತುಣುಕು ನೆಲವೇ ಜೀವನ ಸರ್ವಸ್ವ. ಆದರೆ ಕೆಲವರಿಗೆ ಸಣ್ಣ ಗುಡಿಸಲುಗಳಲ್ಲಿ ವಾಸಿಸುವ ಭಾಗ್ಯವೂ ಇದೆ. ಗುಡಿಸಲುಗಳಾದರೂ ಹೇಗುಂಟು

ಬಿನ್ನುತ್ತೀರಿ ? ನಾಗರಿಕರಿಂದ ವಿಸರ್ಜಿಸಲ್ಪಟ್ಟ ಅಸಹ್ಯವಾದ ಜಾಗ ಗಳಲ್ಲಿ ತೆಂಗಿನ ಗರಿಗಳನ್ನು ಹೆಣೆದು ಗೋಡೆ ಮಾಡು ಕಟ್ಟಿ ತಮ್ಮ ಅರ ಮನೆಗಳನ್ನು ಕಟ್ಟಿಕೊಳ್ಳುತ್ತಾರೆ. ಈ ಗುಡಿಸಲ ನಿವಾಸಿಗಳ ಜೀವನ ಸ್ಥಿತಿ, ಬೀದಿ ನಿವಾಸಿಗಳ ಸ್ಥಿತಿಗಿಂತ ಉತ್ತಮವಾಗಿಯೇನೂ ಇಲ್ಲ.

" ಇನ್ನು ಇವರ ನೈತಿಕ ಜೀವನದ ಬಗ್ಗೆ ಕೇಳುತ್ತೀರಾ ? ಅದನ್ನು ಬರೆಯದಿರುವದೇ ಲೇಸೆಂದು ತೋರುತ್ತದೆ. ಆದರೂ ನಿಮ್ಮ ಅವಗಾಹ ನೆಗೆ ಬರೆಯುವೆನು. ಈ ನಿರ್ಗತಿಕ ಹೆಂಗಸರ ಜೀವನ ವ್ಯಭಿಚಾರದಿಂದ ಸಾಗಿದೆ. ರಿಕ್ಷಾ ಕೈಬಂಡಿಗಳನ್ನೆಳೆಯುವ ಈ ಬಡ ಗಂಡಸರು ಇಂತಹ ಕಲುಷಿತ ಬಾಳುವೆಯಲ್ಲಿ ಸೇರಿಕೊಂಡಿದ್ದಾರೆ ಇವರಿಗೆ ಸರಿ ದಾರಿಯನ್ನು ತೋರಿಸುವವರು ಯಾರೂ ಇಲ್ಲ.

" ಯಾರೂ ಇಲ್ಲ ಅಂದೆನೇ ? ಹೌದು. ಹಿಂದುಗಳಾದ ಇವರನ್ನು ಹಿಂದುಗಳು ಲೆಕ್ಕಿಸುವುದೇ ಇಲ್ಲ ಇವರ ಉದ್ಧಾರದ ಆಲೋಚನೆ ಯಾವ ಆದರ್ಶವಾದಿಗಳ ಕಣ್ಣಿಗೂ ಬಿದ್ದಿಲ್ಲ ಸಮಾಜ ಸೇವಕರೆಂದು ಮೆರೆದಾಡುವ ಭಾಗ್ಯಶಾಲಿಗಳು ಈ ಕಡೆ ನೋಡುತ್ತಿಲ್ಲ. ನೋಡಿದರೂ ಅದು ಸ್ವಪ್ರತಿಷ್ಠೆಗಾಗಿ, ಹೊರತು ಅಂತಃಕರಣ ಪೂರ್ವಕವಾಗಿಯಲ್ಲ.

" ಈ ಬಡತನ, ಈ ನೈತಿಕ ಅಧಃಪತನ ಇವುಗಳನ್ನು ಕೊನೆಗಾಣಿ ಸಲು ಉಪಾಯವೇನು ಎಂದು ನಾನು ಚಿಂತಿಸಿದೆ. ವಿದ್ಯಾ ಪ್ರಚಾರವೇ ಸುಲಭದ ಹಾದಿ ಎಂದು ನನಗನಿಸಿತು ಇವರನ್ನು ವಿದ್ಯಾವಂತರನ್ನಾಗಿ ಮಾಡಿ, ಸಂಸ್ಕೃತಿಯ ಪಾಠಗಳನ್ನು ಹೇಳಿ, ಮನಸ್ಸಿನ ವೈಶಾಲ್ಯಕ್ಕೆ ಎಡೆಗೊಟ್ಟು, ಆತ್ಮವಿಕಾಸಕ್ಕೆ ದಾರಿ ತೋರಿಸಿದರೆ, ಈ ವಿಷಮತೆ, ನಾಗ ರಿಕ ಲೋಕದ ಈ ಹುಣ್ಣು,ದೇವರ ಸಾಮ್ರಾಜ್ಯದಲ್ಲಿನ ಈ ಕೊರತೆಯನ್ನು ಹೋಗಲಾಡಿಸಬಹುದೆಂದು ನಾನು ನಿಶ್ಚಯಿಸಿದೆನು. ಈ ಬಗ್ಗೆ ಅಲ್ಲಲ್ಲಿ ಶಾಲೆಗಳನ್ನು ತೆರೆದೆನು. ಈ ಆರು ವರ್ಷಗಳಲ್ಲಿ ಹಲವರು ಇದರಿಂದ ಪ್ರಯೋಜನ ಹೊಂದಿದ್ದಾರೆಂದು ನನಗೆ ಧೈರ್ಯವಾಗಿದೆ...."

ಶಿವನಿಗೆ ' ದೇವರ ಸಾಮ್ರಾಜ್ಯ ' ದ ಯಾವ ಭಾಗವೂ ಅರ್ಥವಾಗ ದಿದ್ದರೂ ಇದಿಷ್ಟು ಅರ್ಥವಾಗಿತ್ತು. ಈ ನುಡಿಗಳಲ್ಲೇ ಫಾದರ್ ಎಂಟನಿ ಯವರ ವ್ಯಕ್ತಿತ್ವದ ಭದ್ರತೆ ಅವನಿಗೆ ಗೋಚರವಾಗಿತ್ತು. ಇದಕ್ಕೆ ಇಂಬು ಗೊಡಲು ಅವರ ಸಾಮೀಪ್ಯವೇ ಸಹಾಯವಾಯಿತು. ಫಾ. ಎಂಟನಿ

ಯವರೇ ಶಿವನಿಗೆ ಉಪಾಧ್ಯಾಯರಾಗಿದ್ದರು. ನಿತ್ರಾಣದಿಂದ ಕಂಗಾಲಾಗಿದ್ದರೂ ಮನಃಪೂರ್ವಕವಾಗಿ ಅವರು ಹೇಳುತ್ತಿದ್ದ ಪಾಠಗಳು, ನೀತಿ ವಚನಗಳು, ಬಡ ಜನರ ಮೇಲೆ ಅವರು ತೋರಿಸುತ್ತಿದ್ದ ಆದರ ಇವುಗಳು ಎಂದೂ ಮರೆತುಹೋಗದಂತಿದ್ದುವು. ಅದಲ್ಲದೆ ಪ್ರತಿಭಾವಂತ ಹುಡುಗನೆಂದು ಅವನ ಮೇಲೆ ಅವರಿಗೆ ವಿಶೇಷವಾದ ಮಮತೆಯಿದ್ದಿತು.

ಬೆಂಚ ಮೇಲೆ ಮಲಗಿದ ಶಿವನಿಗೆ ಅಂದು ಶಾಲೆಯಲ್ಲಿ ಫಾ. ಎಂಟನಿಯವರೊಡನೆ ನಡೆದ ಭೇಟಿ ಮನವೆದುರು ಮೂಡಿ ಬಂದಿತು.

ಶಾಲೆಗೆ ಎಂಟು ಗಂಟೆಗೆ ಹೋದೊಡನೆ ಆರಂಭದ ವಿದ್ಯಾರ್ಥಿಗಳಿಗೆ ಹೇಳಿಕೊಡುತ್ತಿದ್ದ ಗುರುಗಳು ಶಿವನನ್ನು ಕಂಡು ಹೇಳಿದರು:

“ಇಂದು ಎಂಟನಿಯವರಿಗೆ ಸೌಖ್ಯವಿಲ್ಲ ಆದ್ದರಿಂದ ಇವತ್ತು ನಿನಗೆ ಪಾಠವಿಲ್ಲ ಶಿವನ್”

“ಏನಾಗುತ್ತದೆ ಗುರುಗಳಿಗೆ?” ಶಿವನ್ ಗಾಬರಿಯಿಂದ ವಿಚಾರಿಸಿದನು.

“ಕೆಮ್ಮು ಜೋರಿದೆ ಮೈ ತುಸು ಬಿಸಿಯೇರಿದೆ. ಏನೆಂದು ಹೇಳಲು ಬರುವುದಿಲ್ಲ. ಎಷ್ಟೆಂದರೂ ವೃದ್ಧಾಪ್ಯ..” ಕಡೆಯ ನುಡಿಗಳನ್ನು ನುಡಿಯುವಾಗ ಗುರುಗಳ ಸ್ವರ ನಡುಗಿತು. ಶಿವನು ಬೆದರಿದನು.

“ನಾ ಅವರನ್ನು ನೋಡಬಹುದೇ?” ಶಿವನ್ ಕಾತರದಿಂದ ಕೇಳಿದನು.

“ಇಲ್ಲ! ಇಲ್ಲ! ಯಾರೂ ಮಾತನಾಡಕೂಡದೆಂದು ಡಾಕ್ಟರರು ಹೇಳಿದ್ದಾರೆ” ಗುರುಗಳು ಅಂದರು.

ಶಿವನ್ ನಿರುಪಾಯನಾಗಿ ಮನೆಗೆ ಹೊರಡುವವನಿದ್ದನು. ಆಗಲೇ ಫಾ. ಎಂಟನಿಯವರ ಬೇಕು ಬೇಡಗಳನ್ನು ನೋಡಿಕೊಳ್ಳುವ ಬಾಲಕ ಬಂದು ಹೇಳಿದ ಆ ಗುರುಗಳೊಡನೆ.

“ಶಿವನ್ ಇಲ್ಲಿಗೆ ಬಂದರೆ ತಮ್ಮಲ್ಲಿಗೆ ಕಳುಹಿಸಬೇಕೆಂದು ಎಂಟನಿ ಗುರುಗಳು ಹೇಳಿದ್ದಾರೆ....”

ಶಿವನ್ ಬಾಲಕನ ಹಿಂದೆ ನಡೆದನು ಇಗರ್ಜಿಯನ್ನು ಪ್ರವೇಶಿಸಿ ಯೇಸುದೇವನ ಪ್ರತಿಮೆಯ ಬಲಪಕ್ಕದಲ್ಲಿನ ಕೋಣೆಯ ಬಾಗಿಲ ಬಳಿ ಬಂದು ನಿಂತನು. ಕರೆದುಕೊಂಡು ಬಂದ ಹುಡುಗ ಹೇಳಿದನು:

"ಒಳಗೆ ಹೋಗು. ಗುರುಗಳು ಕಾದು ಕುಳಿತಿದ್ದಾರೆ."

ಬಾಗಿಲನ್ನು ಮೆಲ್ಲನೆ ದೂಡಿ, ಒಳ ಸೇರಿ, ಶಿವನ್ ಬಾಗಿಲನ್ನು ಮುಚ್ಚಿಕೊಂಡನು. ಬಾಗಿಲು ತೆರೆಯುವ ಸದ್ದು ಕೇಳಿಸಿದಾಗ, ಆರಾಮ ಕುರ್ಚಿಯಲ್ಲಿ ಕುಳಿತು ಬೈಬಲ್ಲನ್ನು ಪಠಿಸುತ್ತಿದ್ದ ವೃದ್ಧ ಗುರುಗಳು ಕೇಳಿದರು:

"ಯಾರದು?"

ಎಂಜಲು ನುಂಗಿಕೊಂಡು ಉತ್ಕಂಠತೆಯಿಂದ ಶಿವನಂದ:

"ನಾನು ಗುರುಗಳೇ ಶಿವನ್!"

"ಓಹೋ! ಶಿವನೇನು?" ದೃಷ್ಟಿಯನ್ನು ಶಿವನ ಮೇಲೆ ಹರಿಸುತ್ತಾ ಪ್ರೇಮಲವಾಗಿ ಫಾ. ಎಂಟನಿ ನುಡಿದರು: 'ಅಲ್ಲಿ ಯಾಕೆ ನಿಂತಿದ್ದೀ ಶಿವನ್? ಬಾ, ಬಾ, ಹತ್ತಿರ ಬಾ. ಈ ಕುರ್ಚಿಯ ಮೇಲೆ ಕುಳಿತುಕೋ!'

ಶಿವನ್ ಮೆಲ್ಲನೆ ಅವರ ಸಮೀಪಕ್ಕೆ ಬಂದು ನಿಂತುಕೊಂಡನಷ್ಟೆ.

"ಕುಳಿತುಕೋ ಎಂದು ಹೇಳಿದೆನಲ್ಲ. ಸಂಕೋಚ ಮಾಡಬೇಡ. ನಿಂತುಕೊಂಡರೆ ನಿನ್ನ ಕಾಲುಗಳಿಗೆ ಆಯಾಸವಾಗಲಿಕ್ಕೂ ಸಾಕು...."

ಶಿವನ್ ಕುಳಿತುಕೊಂಡನು. ಫಾ. ಎಂಟನಿ ತಲೆ ಕೆಳಗೆ ಹಾಕಿ ಚಿಂತಾಮಗ್ನರಾದರು. ಶಿವನಿಗೆ ಆ ಮೌನ ಅಸಹ್ಯವಾಯಿತು. ಕಾಲ ಬೆರಳಿನಿಂದ ನೆಲವನ್ನು ಕೆದರುತ್ತ ಪ್ರಯತ್ನಪಟ್ಟು ಶಿವನುಸುರಿದ:

"ನಿಮಗೆ ಸೌಖ್ಯವಿಲ್ಲ ಅಂದರು.... ದೇವರು ನಿಮಗೆ ಆರೋಗ್ಯವನ್ನು ದಯಪಾಲಿಸಲೆಂದು ಬೇಡಿಕೊಳ್ಳುತ್ತೇನೆ...."

"ಆಂ, ಏನು ಹೇಳಿದಿ?" ತಟ್ಟನೆ ಫಾ. ಎಂಟನಿ ಉದ್ಗರಿಸಿದರು. "ಓ! ಹೌದು! ಹೌದು! ನನಗೆ ಸ್ವಲ್ಪ ಸೌಖ್ಯವಿಲ್ಲ. ಆರೋಗ್ಯ? ಇನ್ನೇಕೆ ಆ ಮಾತುಗಳು? ನನ್ನ ಕಾಲವಾಗುತ್ತಾ ಬಂದಂತೆ ನನಗನಿಸುತ್ತದೆ. ಇನ್ನು ಹೆಚ್ಚು ಕಾಲ ನಾ ಬದುಕುವೆನು ಎಂಬ ಧೈರ್ಯ ನನಗಿಲ್ಲ...."

ಶಿವನ ಕುತ್ತಿಗೆಯುಬ್ಬಿ ಬಂದಿತು. ಕಣ್ಣುಗಳು ವಿವರ್ಣವಾದುವು. ಫಾ. ಎಂಟನಿ ಅದನ್ನು ಗುರುತಿಸದೆ ಹೋಗಲಿಲ್ಲ ಕೂಡಲೇ ಮುಗುಳು ನಗು ಬೀರುತ್ತಾ ಅಂದರು:

"ದುಃಖವೇತಕೆ ಶಿವನ್ ಅದಕ್ಕಾಗಿ? ಹುಟ್ಟಿದವನು ಸಾಯಲೇ ಬೇಕಲ್ಲ?''

"ಆದರೆ........ಆದರೆ ಗುರುಗಳೇ! ನೀವು ಎಲ್ಲಿಯೋ ದೂರ ದೇಶದಿಂದ ಬಂದವರು. ಅಲ್ಲಿ ನಿಮಗೆ ಬೇಕಾದವರು, ನಿಮ್ಮ ತೀರ ಹತ್ತಿರದವರೆಲ್ಲ ಇರಬಹುದು. ಅವರನ್ನೆಲ್ಲ ಕಾಣದೆ, ನಿಮ್ಮ ತಾಯಿ ನಾಡನ್ನೂ ಕಾಣದೆ, ಈ ದೂರದ ಪರದೇಶದಲ್ಲಿ....''

ಫಾ. ಎಂಟನಿ ಶಿವನ ಉದ್ವೇಗದ ಮಾತುಗಳನ್ನು ನಿಲ್ಲಿಸಿ ಅವಸರದಿಂದ ಹೇಳಿದರು:

"ಶಿವನ್! ಶಿವನ್! ಏನು ಹೇಳುತ್ತಿದ್ದೀಯೋ ನೀನು? ಇಲ್ಲಿ ನೋಡು. ನಿನಗೇನು ಕಾಣಿಸುತ್ತದೆ ಹೇಳು...."

"ಶಿಲುಬೆಯಲ್ಲಿ ತೂಗಾಡುವ ಯೇಸುದೇವ!" ಗೋಡೆಯ ಮೇಲಿನ ಪ್ರತಿಮೆಯನ್ನು ನೋಡಿ ಅಂದನು ಶಿವನ್.

"ದೇವರು! ಶಿವನ್, ದೇವರು ನನ್ನನ್ನೀ ದೇಶಕ್ಕೆ ಕಳುಹಿಸಿದ್ದಾರೆ. ನನಗೆ ನೀವೇ ನೆಂಟರಿಷ್ಟರು. ನೀವೇ ನನ್ನಕ್ಕ ತಂಗಿ, ಅಣ್ಣ-ತಮ್ಮಂದಿರು. ಇವನು ನನಗೆ ಬೇಕಾದವ, ಇವನು ನಿನಗೆ ಬೇಡಾದವನು ಎಂದು ದೇವರು ಬೇರೆ ಬೇರೆ ದೃಷ್ಟಿಯಿಂದ ನೋಡುವುದಿಲ್ಲ. ಎಂತಹ ಪಾಪಿಗೇ ಆಗಲಿ ಆವನು ತನ್ನ ಕರುಣಾಮಯವಾದ ವಿಶಾಲವಾದ ಹೃದಯದಲ್ಲಿ ಎಡೆಗೊಡುತ್ತಾನೆ...." ಫಾ. ಎಂಟನಿ ಕುರ್ಚಿಯಿಂದೆದ್ದು ಪ್ರತಿಮೆಯ ಬಳಿಗೆ ನಡೆದರು ಒಂದು ನಿಮಿಷ ಹಾಗೆಯೇ ಮೌನವಾಗಿದ್ದು, ಮೆಲ್ಲನೆ ತಲೆ ತಿರುಗಿಸಿ ಶಾಂತವಾಗಿ ಹೇಳಿದರು:

"ನಾನು ಇದೇ ವಿಷಯದಲ್ಲಿ ನಿನ್ನೊಡನೆ ಒಂದು ಮಾತು ಹೇಳಬೇಕೆಂದು ಕರೆದೆನು. ಶಿವನ್, ನೋಡು! ನನ್ನ ಈ ವರೆಗಿನ ವಿದ್ಯಾರ್ಥಿಗಳಲ್ಲಿ ನಿನ್ನಲ್ಲಿ ನಾ ಹೆಚ್ಚಿನ ಗುಣಗಳನ್ನು ಕಂಡಿದ್ದೇನೆ ಸಭ್ಯ ಮನುಷ್ಯನಲ್ಲಿರಬೇಕಾದ ಗುಣಗಳು ನಿನ್ನಲ್ಲಿವೆ ಹೇಳಿದ ಮಾತುಗಳನ್ನು ಅರಿತುಕೊಳ್ಳುವ ಹೃದಯ ನಿನಗಿದೆ. ಆದ್ದರಿಂದ ಹೇಳುತ್ತಿದ್ದೇನೆ. ನೀನು ನಿನ್ನ ಜನರನ್ನು ಮರೆಯಬೇಡ, ಶಿವನ್! ನೀನು ಯಾವ ಜನ ಸಮುದಾಯದಲ್ಲಿ ಹುಟ್ಟಿದೆಯೋ ಎಂತಹ ಕೀಳು ಜೀವನದಲ್ಲಿ ನಿನ್ನ ಬಾಲ್ಯ ಕಳೆಯಿತೋ ಅದನ್ನು ಮರೆಯಬೇಡ. ಆ ಜನರನ್ನು ಉದ್ಧಾರ ಮಾಡು

ವುದು ನಿನ್ನ ಕರ್ತವ್ಯವಾಗಿದೆ. ವಿದ್ಯಾವಂತನಾದ ನಿನಗೆ ನಿನ್ನ ಸಮಾಜದ ಋಣವಿದೆ.... ಆ ಋಣವನ್ನು ನೀನು ತೀರಿಸಲಿಕ್ಕೇ ಬೇಕು. ಆ ಜನರ ಉದ್ಧಾರ ಕಾರ್ಯವನ್ನು ನೀನು ಕೈಕೊಳ್ಳಲೇ ಬೇಕು. ನೀನು ಏನೇ ಕೆಲಸ ಮಾಡು. ಅದರಿಂದ ನಿನ್ನ ಜನರಿಗೆ ಉಪಯೋಗವಾಗುತ್ತಿದೆಯೋ ಎಂದು ನೋಡು ..."

ಭಾವನಾಮಯನಾಗಿ, ಕಂಗಳಲ್ಲಿ ನೀರು ತುಂಬಲು, ಗದ್ಗದ ಸ್ವರದಿಂದ ಶಿವನುಸುರಿದನು:

"ಹಾಗೆಯೇ ಮಾಡುವೆನು ಗುರುಗಳೇ!"

"ನೀನೀ ಶಾಲೆಯಲ್ಲಿ ಕಲಿಯುವುದು ಮುಗಿಯುತ್ತಾ ಬಂದಿತು. ಆಮೇಲೆ ನೀನು ಹೆಚ್ಚಿನ ಪುಸ್ತಕಗಳನ್ನೋದಿ ಜ್ಞಾನ ಸಂಗ್ರಹ ಮಾಡಿಕೊಳ್ಳಬೇಕು."

"ಹಾಗೆಯೇ ಮಾಡುವೆನು...."

"ಶಿವನ್! ಇದು ಬಹುಶಃ ನನ್ನ ಕೊನೆಯ ಮಾತಾಗಿರಬಹುದು ನಾ ಹೇಳಿದುವನ್ನು ಮಾತ್ರ ಮರೆಯಬೇಡ ಶಿವನ್!"

"ಖಂಡಿತ ಮರೆಯುವುದಿಲ್ಲ ಗುರುಗಳೇ!"

"ಆ ಕಪಾಟಿನ ಬಳಿ ಹೋಗಿ, ಒಳಗಿನಿಂದ ಒಂದು ಪುಸ್ತಕ ತೆಗೆದುಕೊಂಡು ಬಾ." ಫಾ. ಎಂಟನಿ ಕೋಣೆಯ ಮೂಲೆಯಲ್ಲಿದ್ದ ಕಪಾಟನ್ನು ತೋರಿಸಿದರು. ಶಿವನ್ ಒಂದು ಪುಸ್ತಕವನ್ನು ತಂದನು. ಅದು ಅವರ 'ದೇವರ ಸಾಮ್ರಾಜ್ಯ'ದ ಪ್ರತಿಯಾಗಿತ್ತು.

ಫಾ ಎಂಟನಿ ಅದನ್ನು ಕೈಯಲ್ಲಿ ತೆಗೆದುಕೊಂಡು. ರಕ್ಷಾ ಕವಚವನ್ನು ಮಗುಚಿ 'ಪ್ರೀತಿಯ ಶಿಷ್ಯ ಶಿವನಿಗೆ' ಎಂದು ಬರೆದು ಕೆಳಗೆ ತಮ್ಮ ರುಜುವನ್ನು ಹಾಕಿದರು.

ಇದನ್ನು ತೆಗೆದುಕೋ ಶಿವನ್. ನನ್ನ ನೆನಪಿಗಾಗಿ, ನಾ ಹೇಳಿದ ಮಾತುಗಳ ನೆನಪಿಗಾಗಿ ಇದನ್ನು ನಿನ್ನ ಬಳಿ ಇಟ್ಟುಕೋ." ಅಂದರನರು.

ಶಿವನ್ ಅದನ್ನು ತೆಗೆದುಕೊಂಡು ಕಂಬನಿ ತುಂಬಿದ ಕಣ್ಣುಗಳಿಗೊತ್ತಿಕೊಂಡನು. ಆರಾಮ ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾ, ತಲೆಯನ್ನು ಹಿಂದಕ್ಕೊರಗಿ ಕಣ್ಣೆವೆಗಳನ್ನು ಮುಚ್ಚಿಕೊಳ್ಳುತ್ತಾ ಗುರುಗಳಂದರು:

" ಇನ್ನು ನೀನು ಹೋಗಬಹುದು ಶಿವನ್ ! "

ಶಿವನಿಗೇಕೋ ದುಃಖವು ಒತ್ತರಿಸಿ ಬಂದಿತು. ಆದರೂ ಅದನ್ನೊತ್ತಿ ತಡೆಹಿಡಿದು ಹೊರಗೆ ನಡೆದನು 'ದೇವರ ಸಾಮ್ರಾಜ್ಯ' ವನ್ನು ಎದೆಗೊತ್ತಿ ಹಿಡಕೊಂಡು ತನ್ನ ಕೋಣೆಗೆ ನಡೆದನು....

" ಶಿವನ್, ಎಷ್ಟು ಹೊತ್ತಾಯಿತು ! ನೀನು ಶಾಲೆಯಿಂದ ಬಂದು ಊಟಕ್ಕೆ ಬಾರದೆ ಇಲ್ಲೀ ಮಲಗಿ ಬಿಟ್ಟಿದ್ದೀಯಲ್ಲಾ ? ನಿನಗಾಗಿ ಕಾದು ಕಾದು ಸಾಕಾಗಿ ನಾನೇ ಬಂದಿದ್ದೇನೆ...." ಸುಂದ್ರಮ್ಮನ ಮಾತು ಹೊರಗಿನಿಂದ ಕೇಳಿಸಿತು.

ಬೆಂಚ ಮೇಲೆ ಒರಗಿಕೊಂಡಿದ್ದ ಶಿವನ್ ತಟ್ಟನೆದ್ದು ಕುಳಿತುಕೊಳ್ಳುತ್ತಾ, ಕಣ್ಣುಗಳನ್ನೊರಸಿಕೊಂಡು ಹೇಳಿದನು:

" ನನಗೆ ಹಸಿವಿಲ್ಲ. ನಾ ಊಟ ಮಾಡುವುದಿಲ್ಲ ಸುಂದ್ರಮ್ಮ ! "

" ಊಹೂಂ. ಹಸಿವಿಲ್ಲ ಎಂದು ನಿದ್ದೆಯ ಅಮಲಿನಲ್ಲಿ ಸುಳ್ಳುಗಿಳ್ಳು ಹಾರಿಸಿದರೆ ನಾ ಕೇಳುವ ಹಾಗಿಲ್ಲ ಶಿವನ್ ಹೂಂ. ಏಳು ! ಏಳು ! "

ಸುಂದ್ರಮ್ಮ ಅವನ ರಟ್ಟೆಯನ್ನು ಹಿಡಿದೆಳೆದಳು. ಅನ್ಯಗತಿಯಿಲ್ಲದೆ ಶಿವನ್ ಅವಳ ಹಿಂದೆ ಊಟಕ್ಕೆ ಹೊರಟನು.

---

## ೧೧

" ಶಿವನ್ ! " ಶೀಲೆ ಹೂದೋಟದಿಂದೋಡಿ ಬಂದು ಕೂಗಿದಳು.

ಗಿಡಗಳಿಗೆ ನೀರೆರೆಯುವ ಕೆಲಸವನ್ನು ತಟ್ಟನೆ ನಿಲ್ಲಿಸಿ, ಶಿವನ್ ತಲೆ ತಿರುಗಿಸಿ ಕೇಳಿದನು:

" ಏನು ಶೀಲಮ್ಮಾ ? "

"ನನ್ನ ತಂದೆ ನಿನ್ನನ್ನು ಕರೆಯುತ್ತಿದ್ದಾರೆ. ನೀನು ಹೋಗಬೇಕಂತೆ...." ಶೀಲೆ ನುಡಿದಳು.

" ಯಾಕಾಗಿ ನಿನಗೆ ಗೊತ್ತಿದೆಯೋ ? " ತುಸು ಗಾಬರಿಯಿಂದಲೇ ಕೇಳಿದನವನು.

" ನನಗೆ ಗೊತ್ತಿಲ್ಲಾ ! " ತುಂಟತನದಿಂದ ನಗುತ್ತಾ, ಶೀಲೆಯುಂಟಳು.

" ಇಲ್ಲ ! ನಿನಗೆ ಗೊತ್ತಿದೆ ! "

" ಗೊತ್ತಿಲ್ಲಾಂತ ಹೇಳಿದ್ದಲ್ಲಿವ್ರೋ ? "

" ನಿನ್ನ ಮುಖ ನೋಡುವಾಗ ಗೊತ್ತಿದ್ದ ಹಾಗೆ ಕಾಣಿಸುತ್ತಿದೆಯಲ್ಲಾ ! "

" ತಂದೆ ಕಾಯುತ್ತಾ ಇದ್ದಾರೆ. ಬೇಗನೇ ಹೋಗು ಒಮ್ಮೆ...."

ಶಿವನ್ ಮನೆಯತ್ತ ನಡೆಯುತ್ತಾ, ಒಮ್ಮೆಲೆ ನಿಂತು ಹಿಂತಿರುಗಿ ಕೇಳಿದನು:

" ಏನೂ ಕೆಟ್ಟದ್ದಿಲ್ಲವಲ್ಲ ಶೀಲಮ್ಮ ? "

" ಕೆಟ್ಟದ್ದಿರುತಿದ್ದರೆ ನಾನು ಹೇಳುತ್ತಿರಲಿಲ್ಲವೇ ? "

" ಹಾಗಾದರೆ ಧೈರ್ಯದಿಂದ ಹೋಗಲೇ ? "

" ಧೈರ್ಯದಿಂದ ಹೋಗು. ನಗಾಡಿಕೊಂಡು ಬರಬಹುದು ! "

" ಅಂದರೆ ನಗುತ್ತಲೇ ಹೋಗಬಹುದಲ್ಲ ? "

" ಅಳುತ್ತ ಬರಬೇಕಾಗಿ ಬರಲಿಕ್ಕಿಲ್ಲ ಎಂದು ನಾ ಧೈರ್ಯ ಹೇಳುತ್ತೇನೆ. " ಶೀಲೆ ನಗುತ್ತಾ ನುಡಿದಳು. ಶಿವನ್ ಮುಂದೋಡಿದನು.

ಮುಂಭಾಗದ 'ಹಾಲಿ' ನಲ್ಲಿ ಚೆಟ್ಟಿಯಾರರು ಸಿಗರೇಟು ಸೇದುತ್ತಾ ಕುಳಿತುಕೊಂಡಿದ್ದರು. ಶಿವನ್ ಅವರ ಬಳಿ ನಡೆದು ನಿಂತುಕೊಂಡನು.

" ಓ ! " ಪತ್ರಿಕೆಯಿಂದ ದೃಷ್ಟಿಯನ್ನು ತೆಗೆದು ಶಿವನ ಮೇಲೆ ಹೊರಳಿಸುತ್ತ ಹೇಳಿದರು: " ನಿನಗೆ ಶಾಲೆಯಲ್ಲಿನ ಓದು ಮುಗಿಯಿತಂತೆಯಲ್ಲಾ ಶಿವನ್ ? "

" ಹೌದು. ನಿನ್ನೆಗೆ ಎಲ್ಲಾ ಮುಗಿಯಿತು. " ಶಿವನಿಗೆ ತನ್ನ ಪ್ರೀತಿಯ ಗುರುಗಳಾದ ಫಾ. ಎಂಟನಿ ತೀರಿ ಹೋದುದು ನೆನಪಾಗಿ ದುಃಖವುಕ್ಕಿ ಬಂತು.

" ಓದು-ಬರೆಹ ಕಲಿತವನಾಗಿ ನೀನು ಗಿಡಗಳಿಗೆ ನೀರು ಹೊಯ್ಯುವುದು ಯೋಗ್ಯವಾಗಿ ಕಾಣುವುದಿಲ್ಲ. " ಚೆಟ್ಟಿಯಾರರಂದರು. ಶಿವನ್ ಆತುರದಿಂದ ಚೆಟ್ಟಿಯಾರರ ಮುಖವನ್ನು ನೋಡಿದನು. ಮಾತನಾಡಲಿಲ್ಲ.

" ಆದ್ದರಿಂದ ನಿನಗೆ ಇನ್ನೊಂದು ಕೆಲಸ ಕೊಡಲು ನಿಶ್ಚಯಿಸಿದ್ದೇನೆ " ಚೆಟ್ಟಿಯಾರರು ತುಸು ಮುಂದೆ ಸಾಗಿ ಹೇಳಿದರು. " ನಮ್ಮ ಬ್ಯಾಂಕಿನ ಬ್ರಾಂಚೊಂದನ್ನು ಪೆರಾಂಟ್‌ರೋಡಿನಲ್ಲಿ ತೆಗೆದಿದ್ದೇವೆ ಅಲ್ಲಿ ಆಫೀಸ್ ಬಾಯ್ ಕೆಲಸ ಖಾಲಿಯೇ ಇದೆ ನೀನು ಆ ಕೆಲಸ ವಹಿಸು...."

ಶಿವನ್ ತಲೆ ತಗ್ಗಿಸಿದನು. ಚೆಟ್ಟಿಯಾರರು ಮುಂದುವರಿಸಿದರು:

" ನೀನು ಇಲ್ಲಿಯೇ ಇರು. ಮನೆಯಲ್ಲಿ ಏನಾದರೂ ಚಿಲ್ಲರೆ ಕೆಲಸ ಮಾಡಿಕೊಂಡಿರು. ನಿನ್ನ ಊಟವೂ ಇಲ್ಲಿಯೇ ಆಗಲಿ ನೀನು ನಾಳೆ ಬೆಳಿಗ್ಗೆಯೇ ಕೆಲಸಕ್ಕೆ ಸೇರಬಹುದು. ತಿಳಿಯಿತೇನು ? ''

ತಲೆಯನ್ನು ನೆಗ್ಗಿ ತಿಳಿಯಿತು ಎಂಬಂತೆ ಶಿವನ್ ತಲೆಯಲ್ಲಾಡಿಸಿದನು

ಚೆಟ್ಟಿಯಾರರು ಎದ್ದು ಕಾರಿನೆಡೆಗೆ ನಡೆದರು. ನಿಧಾನವಾಗಿ ಶಿವನ್ ಮೆಟ್ಟಲುಗಳನ್ನಿಳಿದನು ಅವನ ತಲೆ ತಗ್ಗಿಕೊಂಡಿತ್ತು. ಕಣ್ಣುಗಳು ಯೋಚನಾಪರವಶವಾಗಿದ್ದುವು. ಮುಖದಲ್ಲಿ ಹೊಸ ಕೆಲಸ ದೊರೆತ ಹುರುಪಿನ ಕಳೆಯೇ ಇರಲಿಲ್ಲ ಏಕೆ ? ಶಿವನಿಗೆ ಹೊಸ ಉದ್ಯೋಗದಲ್ಲಿ ಸುಖವಿಲ್ಲವೇನೋ ? ತನಗೆ—ಇಷ್ಟು ಕಷ್ಟಬಟ್ಟು ಕಲಿತ ತನಗೆ ಗುಮಾಸ್ತನ ಕೆಲಸ ದೊರೆಕೀತೆಂದು ಶಿವನು ಊಹಿಸಿದ್ದನು ಶೀಲೆಯೂ ಕೂಡ ಅನೇಕ ಬಾರಿ, ತಂದೆಯ ಬಳಿ ಹೇಳಿ ಕ್ಲಾರ್ಕನ ಕೆಲಸ ದೊರಕಿಸಿ ಕೊಡುತ್ತೇನೆ ಎಂದು ಹೇಳಿದ್ದಳು. ಆದರೆ ಈಗ ದೊರೆತ ಕೆಲಸವೇನು ? ಬ್ಯಾಂಕಿನ ಪೇದೆ! ಶಿವನ ಕುತ್ತಿಗೆಯುಬ್ಬಿ ಬಂದಿತು ಶೀಲೆ ತಂದೆಯ ಬಳಿ ಹೇಳಿ ತನಗೆ ತೆಗಯಿಸಿ ಕೊಟ್ಟ ಕೆಲಸವು ಇದೇ ಏನು ? ತಾನಿಷ್ಟು ಕಷ್ಟಪಟ್ಟು ಮುಂದೆ ಬರಬೇಕೆಂದು ಓದಿದುದರ ಪ್ರತಿಫಲವು ಇಷ್ಟೇ ತಾನೇ ? .. ಶಿವನಿಗೆ ಮನಸ್ಸಿನಲ್ಲಿ ಸಹನಾತೀತ ವೇದನೆ ತುಂಬಿಕೊಂಡಿತು. ಮನದ ಯಾವದೋ ಒಂದು ಮೂಲೆಯಿಂದ ಒಂದು ಮಾತು ಕೇಳಿಸಿತು

"....ನಿನ್ನ ಜನರ ಉದ್ಧಾರವನ್ನೇ ನೆನಪಿನಲ್ಲಿಟ್ಟುಕೊಂಡು ನೀನು ಕೆಲಸ ಮಾಡಬೇಕು... "

ಫಾ. ಎಂಟನಿ ಅವರು ಹೇಳಿದ್ದರು ಈ ಮಾತನ್ನು ಶಿವನ್ ತನ್ನಲ್ಲೇ ಕೂಗಿಕೊಂಡ ನನ್ನ ಜನರ ಉದ್ಧಾರವಾದೀತೇ ಈ ಕೆಲಸ

ದಿಂದ? ಜನರ ಉದ್ಧಾರವೇಕೆ ನನ್ನ ಉದ್ಧಾರವೇ ಆಗಲಿಕ್ಕಿಲ್ಲ. ಅಯ್ಯೋ! ಜನರ ಉದ್ಧಾರಕ್ಕಾಗಿ ನಾನು ಯಾವ ಕೆಲಸ ಮಾಡಬೇಕು? ನಾ ಶಾಲೆ ತೆಗೆಯಲೇ? ಅದಕ್ಕೆ ತನ್ನ ಬಳಿ ಹಣವಿದೆಯೇ? ಆ ಭಾರ ಹೊರುವ ಶಕ್ತಿ ತನ್ನಲ್ಲಿದೆಯೋ?.... ಶಾಲೆ! ಚೆಟ್ಟಿಯಾರರು ವಿಶಾಲ ಹೃದಯದಿಂದ ನನಗೆ ಶಾಲೆಗೆ ಹೋಗಲು ಬಿಟ್ಟರು. ಈಗ ಅವರು ಕೀಳು ಕೆಲಸ ಕೊಟ್ಟರೆಂದು ನಾನು ವಿಷಾದಿಸುವುದು ಸರಿಯೋ? ಶಿವನ್ ತನ್ನಲ್ಲೇ ಯೋಚಿಸಿಕೊಂಡ.

ಕೀಳು ಕೆಲಸ!.... ಯಾವದು ಕೀಳು? ಯಾವದು ಕೀಳಲ್ಲ? ಯಾವದೋ ಕಾಣದ ಕೈಯು ತನ್ನನ್ನು ಈ ಮನೆಗೆ ತಳ್ಳದಿದ್ದರೆ ತಾನೀಗ ರಿಕ್ಷಾ ಎಳೆದುಕೊಂಡು ಇರುತ್ತಿದ್ದೆನೋ ಏನೋ? ಅಂಥಾ ನನಗೆ ಪೇದೆಯ ಕೆಲಸ ದೊರೆತಿದೆ. ಅದು ಸಾಲದೇ?... ಸಾಲದೇ?....

ಶಿವನ ಯೋಚನಾ ಪ್ರವಾಹಕ್ಕೆ ಶೀಲೆಯ ಮಾತು ಅಡ್ಡ ಬಂದಿತು. "ಆಹಾ! ಏನು ಆಲೋಚನೆ ಮಾಡುತ್ತೀ? ಕೆಲಸ ಸಿಕ್ಕೇ ಬಿಟ್ಟಿತಲ್ಲಾ!'' ಶಿವನ್ ತಲೆಯೆತ್ತಿ ನೋಡಿದನು ಹೂ ಗಿಡಗಳ ನಡುವಿನಲ್ಲಿ ಶೀಲೆ ಹೂವಿನಂತೆಯೇ ಶೋಭಿಸುತ್ತಿದ್ದಳು. ಎಂತಹ ಅಪೂರ್ವ ಕಳೆ ತುಂಬಿದೆ ಅವಳ ಮುಖದಲ್ಲಿ! ಎಷ್ಟು ಉಲ್ಲಾಸದಿಂದ ಪುಲಕಿತನಾದಂತಿದೆ ಅವಳು ನಿಂತ ನಿಲುವು! ತನಗೆ ಎಂತಹದೇ ಆಗಲಿ ಕೆಲಸ ದೊರೆಯಿತಲ್ಲಾ ಎಂದು ಎಷ್ಟು ಹರ್ಷಗೊಂಡಿದ್ದಾಳೆ! ಭಾವೋದ್ವೇಗದಿಂದ ಅವನ ಹೃದಯ ಕಣ್ಣುಗಳಲ್ಲಿ ಬಂತು ತುಂಬಿದ ಹೃದಯದಿಂದ ಅವನು ಉಸುರಿದನು:

"ಶೀಲಾ!"

"ಅರೆ! ಸಂತೋಷದಿಂದ ನಲಿಯ ಬೇಕಾದ ಸಂದರ್ಭದಲ್ಲಿ ಕಣ್ಣಲ್ಲೇಕೆ ನೀರು?" ಬೆರಳು ಕಚ್ಚಿಕೊಂಡು ಶೀಲೆ ಗಾಬರಿಯಿಂದ ಅಂದಳು.

"ಶೀಲಾ ನಿನ್ನಿಂದಾಗಿಯೇ ನಾನೀ ಸ್ಥಿತಿಗೆ ಬಂದೆನು ನಿನ್ನ ಪ್ರೋತ್ಸಾಹದಿಂದಲೇ ನಾ ಶಾಲೆಗೆ ಹೋದೆನು. ನೀನು ಕೊಟ್ಟ ಪುಸ್ತಕಗಳಿಂದಲೇ ನನ್ನ ಜ್ಞಾನಾಭಿವೃದ್ಧಿಯಾಗಿ ನಾ ಮನುಷ್ಯನಾದೆನು. ನೀನೇ ನನಗೆ ತಂದೆಯವರ ಬಳಿ ಹೇಳಿ, ಕೆಲಸ ಕೂಡ ಒದಗಿಸಿ ಕೊಟ್ಟೆ ..."

ಹೋ ! ನಿಲ್ಲಿಸು ! ನಿಲ್ಲಿಸು ! ಈ ಗುಣವರ್ಣನೆಯನ್ನು ನಿಲ್ಲಿಸಿ ಬಿಡು. ನಾನೇನು ಮಾಡಿದ್ದೇನೆ ಶಿವನ್ ?.... ನೀನು ನನ್ನ ಜೀವವನ್ನು ಳಿಸಿದೆ. ಆ ರಾತ್ರಿ ಈಗಲೂ ನನ್ನ ಕಣ್ಮುಂಧಿದೆ ಶಿವನ್ ! ನಾ ನಿನ್ನನ್ನು ಎಂದಿಗೂ ಮರೆಯಲಾರೆ ! ನಿನ್ನ ಉಪಕಾರದೆದುರು ಇದೆಲ್ಲ ತೀರ ಕ್ಷುಲ್ಲಕ ವಾದವುಗಳು ಅಲ್ಲವೇ ?...."

" ನೀನು ಬೇಕಾದರೆ ಹಾಗೆ ತಿಳಿ. ಆದರೆ ನಾ ಹಾಗೆ ತಿಳಿಯಲಾರೆ ! "

" ಆ ಮಾತು ಬಿಡು ಶಿವನ್ ! ಆದರೆ ನಿನಗೆ ಈ ಕೆಲಸ ಖುಷಿ ಆಯಿತೋ ಇಲ್ಲವೋ ಹೇಳು.... ನಿನಗೆ ಖುಷಿ ಆದೀತೆಂದು ಊಹಿಸಿ ತಂದೆಯವರ ಬಳಿ ಹೇಳಿದೆ....

" ತುಂಬ ಉಪಕಾರವಾಯಿತು. ನಾನಿದನ್ನು ಮರೆಯಲಾರೆ. " ಶಿವನಂದ. ಅವನ ಸ್ವರ ಕಂಪಿಸಿತು. ಒಡಲ ವೇದನೆ ಸಹನಾತೀತವಾದ ರೂಪವನ್ನು ತಾಳಿತು. ತನ್ನ ಒದುಕಿನ ಮೇಲೆಲ್ಲ ತನ್ನ ಮಾಂತ್ರಿಕ ಕೈಯನ್ನಾಡಿಸಿ, ಅದಕ್ಕೊಂದು ರೂಪುಕೊಟ್ಟ ಶೀಲೆಯ ಆ ಮಾತುಗಳು ಅವನೆದೆಯನ್ನು ಏಕೋ ನೂರಾರು ಹೋಳುಗಳನ್ನಾಗಿ ಮಾಡಿ ಬಿಟ್ಟವು ಅಲ್ಲಿ ನಿಲ್ಲಲಾರದೆ ಶಿವನ್ ತನ್ನ ಕೋಣೆಗೋಡಿದನು.

ಶೀಲೆಗೆ ಗಾಬರಿಯಾಯಿತು. ತಾನು ಹೇಳಿ ತೆಗೆಯಿಸಿ ಕೊಟ್ಟ ಕೆಲಸ ಅವನಿಗೇಕೆ ಮೆಚ್ಚುಗೆಯಾಗಲಿಲ್ಲವೋ ಎಂದಾಕೆಗೆ ಕಳವಳವಾಯಿತು. ಅವನ ಕೋಣೆಗೆ ನಡೆದಳು. ಕಣ್ಣೀರು ಸುರಿಸುತ್ತ ಕುಳಿತ ಶಿವನನ್ನು ಕೇಳಿದಳು:

" ಶಿವನ್, ಇದೇಕೆ ಕಣ್ಣೀರು ? "

ತಲೆ ನೆಗ್ಗಿ ವ್ಯಗ್ರವಾಗಿ ಶಿವನ್ ಶೀಲೆಯನ್ನು ನೋಡಿದ. ಕಳವಳದಿಂದ ಶೀಲೆ ಒಂದು ಹೆಜ್ಜೆ ಮುಂದೆ ಸರಿದು ಕಾತರದಿಂದ ಕೇಳಿದಳು:

" ನಿನಗೆ ಸಂತೋಷವಾಗಲ್ಲಿಲ್ಲವೇ ಶಿವನ್ ? "

ತಲೆ ತಗ್ಗಿಸಿ ಶಿವನ್ ನುಡಿದನು. " ನನಗೆ ಸಂತೋಷವಾಗಿದೆ ಶೀಲಾ ! ಸಂತೋಷದಿಂದಲೂ ಕಣ್ಣೀರು ಬರುತ್ತದಲ್ಲವೇ ?........" ಪ್ರಯತ್ನದಿಂದ ಶಿವನ್ ನಕ್ಕನು ಕೂಡ. ಆ ನಗುವಿನ ಹಿಂದಿನ ಅಳಲಿನ ಹೊರೆ ಶೀಲೆಗೆ ಮಾತ್ರ ತಿಳಿಯಲಿಲ್ಲ....

ಮರುದಿನ ಬೆಳಿಗ್ಗೆ ಚೆಟ್ಟಿಯಾರರೊಡನೆ ಅವರ ಕಾರಿನಲ್ಲಿ ಕುಳಿತು ಶಿವನ್ ತನ್ನ ಹೊಸ ಜೀವನವನ್ನು ಸ್ವಾಗತಿಸಲು ಹೊರಟನು. ಮೋಟರ ಕಾರಿನಲ್ಲಿ ಅವನು ಕುಳಿತುಕೊಳ್ಳುವುದು ಇದು ಎರಡನೆಯ ಸಲ. ಮೊದಲನೆಯ ಸಲ ಎಂಟು ವರ್ಷಗಳ ಹಿಂದೆ. ಅದೇ ಡ್ರಾಯವರನ ಸೀಟಿನ ಪಕ್ಕದಲ್ಲಿ ಕುಳಿತುಕೊಂಡು ನ್ಯಾಯಾಲಯದ ಹೆಬ್ಬಾಗಿಲ ಬಳಿಯಿಂದ ಚೆಟ್ಟಿಯಾರರ ಮನೆಗೆ ಬಂದಿದ್ದನು. ಅವನ ಜೀವನದಲ್ಲಿ ಅದು ಒಂದು ಹೊಸ ಅಧ್ಯಾಯವನ್ನು ತೆರೆದಿತ್ತು. ಇದೀಗ ಎರಡನೇ ಬಾರಿ, ಕಾರಿನಲ್ಲಿ ಕುಳಿತು ಹೊಸ ಉದ್ಯೋಗದ ಬೆನ್ನು ಹಿಡಿದು ಹೊರಟಾಗ, ಜೀವನದ ಇನ್ನೊಂದು ಅಧ್ಯಾಯವು ತೊಡಗುವಂತೆ ಶಿವನಿಗನಿಸಿತು. ಹಿಂದಿನ ಆ ಯಾತ್ರೆ, ಇಂದಿನ ಈ ಯಾತ್ರೆ— ಇವುಗಳನ್ನು ನೆನೆದು ಅವನು ಭಾವಗಡಲಲ್ಲಿ ಮುಳುಗಿದನು.

ಕಾರಿನ ಓಟದ ಗತಿ ಮೆಲ್ಲನೆ ಕಡಿಮೆಯಾಗುತ್ತಾ ಕಾರು ಒಂದು ಕಡೆ ನಿಂತುಕೊಂಡಿತು. ಆಗಲೇ ಶಿವನಿಗೆ ಇದರ ಅರಿವಾಯಿತಷ್ಟೆ. ಕಾರಿನ ಬಾಗಿಲನ್ನು ತೆರೆದು ಕೆಳಗಿಳಿದು ಹಿಂದಿನ ಭಾಗದ ಬಾಗಿಲನ್ನು ತೆರೆದನು. ಚೆಟ್ಟಿಯಾರರು ಶಿವನ ಚುರುಕುತನವನ್ನು ಕಂಡು, ಸಂತೋಷಗೊಳ್ಳುತ್ತಾ ಕೆಳಗಿಳಿದರು. ಶಿವನು ಅವರ ಹಿಂದೆ ನಡೆದನು. ಎದುರಿನ ಕಟ್ಟಡದ ಮೇಲೆ 'ಚೆಟ್ಟಿಯಾರ್ ಬ್ಯಾಂಕ್' ಎಂಬ ಭವ್ಯ ಬೋರ್ಡು ಅವನ ಕಣ್ಣುಗಳನ್ನು ಕುಕ್ಕಿಸಿತು. ಅವನು ವಿಶಾಲವಾದ ಕಟ್ಟಡವನ್ನು ಪ್ರವೇಶಿಸಿದನು.

ಒಳಗೆ ಒಬ್ಬ ಖಾಕಿ ಉಡುಪಿನವನು— ಪೇದೆ ಎಂದು ಶಿವನಿಗೆ ಕೂಡಲೇ ತಿಳಿಯಿತು— ಚಟ್ಟನೆ ತಾನು ಕುಳಿತ ಸ್ಟೂಲಿನಿಂದೆದ್ದು ಚೆಟ್ಟಿಯಾರರವರಿಗೆ ಸಲಾಂ ಹೊಡೆದನು.

"ರಾಜು, ನಿನ್ನೆ ಹೊಲಿಸಿ ತಂದ ಡ್ರೆಸ್ಸನ್ನು ಇವನಿಗೆ ಕೊಟ್ಟು ಬಿಡು." ಅಂದರು ಚೆಟ್ಟಿಯಾರರು.

ಶಿವನ್ ತಾನಲ್ಲಿಯೇ ನಿಂತುಕೊಳ್ಳಬೇಕಾಗಿದೆಯೆಂದು ಊಹಿಸಿ ಅಲ್ಲಿಯೇ ನಿಂತುಕೊಂಡನು. ತುಸು ಮುಂದೆ ನಡೆದ ಚೆಟ್ಟಿಯಾರರು ಹಿಂದೆ ತಿರುಗಿ ನೋಡಿ ಹೇಳಿದರು:

"ಅಲ್ಲೇಕೆ ನಿಂತು ಬಿಟ್ಟೆ? ನನ್ನೊಡನೆ ಬಾ...."

ಶಿವನ್ ಮುಂದೋಡಿದನು. ಕೋಣೆಯೊಳಗೆ ಮೇಜೊಂದರ ಆಚೀಚೆ ಬದಿಯಲ್ಲಿ ಇಬ್ಬರು ಅಚ್ಚುಕಟ್ಟಿನ ಉಡುಪು ಧರಿಸಿದವರಿದ್ದರು. ಚೆಟ್ಟಿಯಾರರನ್ನು ಕಂಡೊಡನೆ ಇಬ್ಬರೂ ಎದ್ದು ನಿಂತು ನಮಸ್ಕಾರ ಮಾಡಿದರು. ಚೆಟ್ಟಿಯಾರರಂದರು

"ನೋಡಿ, ಇವನನ್ನು ಆಫೀಸ್ ಬಾಯ್ ಆಗಿ ನೇಮಿಸಲಾಗಿದೆ. ಇವನು ಬ್ಯಾಂಕಿನ ಒಳಗಿನ ಕೆಲಸವನ್ನು ಮಾತ್ರ ನೋಡಿಕೊಳ್ಳಲಿ. ಹೊರಗೆ ಹೋಗಬೇಕಾದ ಕೆಲಸಕ್ಕೆಲ್ಲ ರಾಜುವನ್ನು ಹಾಕಿ ಬಿಡಿರಿ...."

"ಸರಿ!" ಎಂದು ತಲೆಯಲ್ಲಾಡಿಸಿದರು.

"ನೀನು ರಾಜುವಿದ್ದಲ್ಲಿ ನಡೆ. ಅವನು ಕೊಟ್ಟ ಉಡುಪನ್ನು ಧರಿಸಿಕೋ ಮತ್ತು ಇವರ ಬಳಿ ಒಂದು ನಿಂತುಕೊ. ಇವರು ಹೇಳಿದ ಕೆಲಸವನ್ನೆಲ್ಲ ಮಾಡಬೇಕು ನೀನು ..." ಎನ್ನುತ್ತ ಚೆಟ್ಟಿಯಾರರು ಒಳಗಿನ ಕೋಣೆಯೊಳಕ್ಕೆ ಹೋದರು

ಶಿವನ್ ರಾಜುವಿದ್ದೆಡೆಗೆ ಸಾಗಿದನು ರಾಜು ಆವನನ್ನು ಹತ್ತಿರದ ಚಿಕ್ಕ ಕೋಣೆಗೊಯ್ದು, ಅವನಿಗೆ ಖಾಕಿ ಉಡುಪುಗಳನ್ನು ನೀಡಿ ಕೇಳಿದನು:

"ನಿನ್ನ ಹೆಸರೇನು?"

"ಶಿವನ್...." ಮನಸ್ಸಿಲ್ಲದ ಮನಸ್ಸಿನಿಂದ ಖಾಕಿ ಉಡುಪನ್ನು ಧರಿಸುತ್ತಾ ಉಸುರಿದನು ಶಿವನ್.

ಆವನ ಖಾಕಿ ಕೋಟಿನ ಮೇಲೆ 'ಚೆಟ್ಟಿಯಾರ್ ಬ್ಯಾಂಕ್' ಎಂದು ಬರೆದ ಹಿತ್ತಾಳೆಯ ತಗಡನ್ನು ಸಿಲುಕಿಸುತ್ತಾ ರಾಜು ತೀರ ಸಂತಸದ ದನಿಯಲ್ಲಿ ಹೇಳಿದ:

"ನನ್ನ ಹೆಸರೇನೆಂದು ಕೇಳುವುದಿಲ್ಲವಲ್ಲಾ ಮ ಹಾ ರಾ ಯಾ? ರಾಜು ಎಂದು ಎಲ್ಲರೂ ಕರೆಯುತ್ತಾರೆ ಅಪ್ಪ ಇಟ್ಟ ಹೆಸರು ಗೋವಿಂದ ರಾಜು ಅಂತ ನೀನು ರಾಜೂ ಎಂದು ಹೇಳಿದರೆ ಸಾಕು ಅದಿರಲಿ: ನೀ ಮೊದಲು ಎಲ್ಲಿ ಕೆಲಸ ಮಾಡಿಕೊಂಡಿದ್ದೆ? ಇಲ್ಲಿ ನಿನಗೆ ಹೇಗೆ ಕೆಲಸ ಸಿಕ್ಕಿತು?"

"ಹೇಗೋ ಸಿಕ್ಕಿತು ನನ್ನ ನಸೀಬ!" ಅನ್ಯಮನಸ್ಕನಾಗಿ ಶಿವನ್ ನುಡಿದ

"ಅಲ್ಲಾ-- ಯಜಮಾನರು ಹೇಳುತ್ತಿದ್ದರು ನಾನು ಹಿಂದಿನಿಂದ ಅಡಗಿ ಕೇಳಿದೆ. ಯಾರೋ ಅವರ ಮನೆಯಲ್ಲಿ ಹೊಡೋಟದ ಕೆಲಸದವ

ನಂತೆ. ಅವನನ್ನು ಕರೆತರುತ್ತೇನೆ ಅಂದು ನೀನೇ ಏನು ಅವನು ?"
ಶಿವನ ಎದೆಯ ಮೇಲೆ ಬೆರಳಿಟ್ಟು ತೀರ ಗಂಭೀರವಾಗಿಯೇ ಕೇಳಿದನು
ರಾಜು. ಶಿವನಿಗೆ ಅವನ ಮಾತು ಕೇಳಿ ನಗು ಬಂತು ನಗುತ್ತ
ಅಂದನು:

"ಹೌದು! ಹೌದು! ನಾನೇ ಅವನು .."

"ಹೋ! ನೀನೆಯೋ?" ಕಣ್ಣುಗಳನ್ನು ದೊಡ್ಡದಾಗಿ ಅರಳಿಸಿ ಉದ್ಗರಿಸಿ, ಕೂಡಲೇ ಹುಬ್ಬುಗಂಟಿಕ್ಕುತ್ತಾ ಶಿವನ ಮುಖದ ಸಮೀಪ ತನ್ನ ಮುಖವನ್ನು ತಂದು ರಾಜು ಇಳಿದನಿಯಲ್ಲಿ ವಿಚಾರಿಸಿದ:"ಹೌದೋ ಶಿವನ್, ನಿನಗೆ ಸಂಬಳವೆಷ್ಟು ಕೊಡುತ್ತಾರಂತೆ? ನನಗೋ ನಲ್ವತ್ತೈದು ರೂಪಾಯಿ ಮಾತ್ರ ಒಬ್ಬಳು ಹೆಂಡತಿ– ಮಹಾಮಾರಿ ಮತ್ತು ನಾಲ್ವರು ಚಿರಿಪಿರಿ ಮಕ್ಕಳು ಮಹಾರಾಯಾ!... ನಿನಗೇನು? ಮದುವೆ ಆಗಿಲ್ಲ ಕಾಣುತ್ತದೆ...."

"ಇಲ್ಲ!"

"ತಂದೆ ತಾಯಿಯರು..."

"ಇಲ್ಲ!"

"ನೆಂಟರಿಷ್ಟರು?"

"ಇಲ್ಲಾ!"

"ಛೆ! ಛೆ! ಛೆ! ಹಾಗಾದರೆ ನೀನು ನನ್ನ ಮನೆಗೊಮ್ಮೆ ಬರಬೇಕು ಶಿವನ್! ನನ್ನನ್ನು ಅಣ್ಣ ಎಂದು ತಿಳಿದುಕೋ...."

ರಾಜು ಇನ್ನೂ ಏನೇನು ಹೇಳಲಿದ್ದನೋ? ಆದರೆ ಕುಳ್ಳನಾದ ಅವನ ಭುಜವ ಮೇಲೆ ಕೈಯಿಟ್ಟು ಶಿವನ್ ಹೇಳಿದ:

"ಮತ್ತೆ ಮಾತನಾಡುವ ರಾಜು! ಈಗ ಕೆಲಸವಿದೆಯಲ್ಲ...."

"ಓ! ಹೌದೌದು! ಯಜಮಾನರು 'ಮಾತು ಹೆಚ್ಚು, ಕೆಲಸ ಕಡಿಮೆ' ಎಂದು ನನಗಾಗಲೇ ಬಯ್ಯುತ್ತಿದ್ದಾರೆ." ರಾಜು ನುಡಿದ ಶಿವನ್ ತನ್ನ ಕೆಲಸದತ್ತ ಹೊರಳಿದನು....

ಸಂಜೆ ೫ ಗಂಟೆಗೆ ಬ್ಯಾಂಕಿನ ಬಾಗಿಲುಗಳನ್ನೆಲ್ಲ ಹಾಕಿ ಶಿವನ್ ಮನೆಗೆ ಹೊರಟನು ಮೂರು ಮೈಲುಗಳಷ್ಟು ನಡೆದು ಮನೆಯ ಸಮೀಪ ಪಕ್ಕೆ ಬಂದನು. ರಸ್ತೆಯ ಆಚೆ ಪಕ್ಕದಲ್ಲಿನ ಕೊಂಪೆಯೆಡೆಗೆ ಅವನ

ದೃಷ್ಟಿ ಹೋಯಿತು. ಅವನು ದಿನಾಲೂ ಅದನ್ನು ನೋಡುತ್ತಿದ್ದನು ಆದರೆ ಬ್ಯಾಂಕಿಗೆ ಸೇರಿದ ಆ ದಿನವೇಕೋ ಅದನ್ನು ನೋಡುವಾಗ ಅವನೆದೆಯಲ್ಲಿ ತಳಮಳವೆದ್ದಿತು. ಹಿಂದಿನ ಘಟನೆಗಳೆಲ್ಲ ಕಣ್ಮುಂದೆ ಬಂದುವು

ಫಕ್ಕನೆ ಅವನ ದೃಷ್ಟಿ ಕಹಿಬೇವಿನ ಮರದೀಚೆಗಿನ ಗೋಡೆಯ ಮೇಲೆ ಹರಿಯಿತು. ಗೋಡೆಯ ಮೇಲೆ ಒಬ್ಬ ಎಲುಬು ಗೂಡಿನಂತೆ ತೋರುವ ಕೃಶನಾದ ಮುದಿ ಮುದಿ ಮುದುಕ ಬೀಡಿ ಎಳೆದುಕೊಂಡು ಕುಳಿತುದು ಅವನಿಗೆ ಕಾಣಿಸಿತು. ಅವನ ಹೃದಯವನ್ನು ಯಾರೋ ಗಕ್ಕನೆ ಸೆಳೆದಂತಾಯಿತು. ಶಿವನ್ ನಿಂತಲ್ಲಿಯೇ ನಿಂತು ತೀಕ್ಷ್ಣವಾಗಿ ನೋಡಿದನು

— ಮುನಿಸ್ವಾಮಿ !

ಮುನಿಸ್ವಾಮಿ ಎಂಟು ವರ್ಷಗಳ ಜೈಲು ಜೀವನವನ್ನು ತಾಳಿ ಬದುಕಿಯಾನು ಎಂದು ಶಿವನೂಹಿಸಿರಲಿಲ್ಲ. ಆದರೆ.... ಮುನಿಸ್ವಾಮಿ ಗೋಡೆಯ ಮೇಲೆ ಕುಳಿತಿದ್ದಾನೆ, ಎಂದಿನಂತೆ ಬೀಡಿ ಸೇದಿಕೊಂಡು ! ಶಿವನ್ ತುಸು ಹೊತ್ತು ಅಲ್ಲಿಯೇ ನಿಂತು ನೋಡಿ ತನ್ನ ಮನೆಯತ್ತ ಹೊರಳಿದನು. ಮುನಿಸ್ವಾಮಿಗೆ ಬಹುಶಃ ಶಿವನ ಗುರುತು ಹತ್ತಲಿಲ್ಲವೇನೋ ! ಶಿವನಿಗೇಕೋ ಕಳವಳ: ಅವನನ್ನು ಆ ಸ್ಥಿತಿಗೆ ತಂದವನು ತಾನಲ್ಲವೇ ಎಂದು ಆವನು ಹೆಚ್ಚು ದಿನ ಬದುಕಲಾರನು ಎಂದು ಶಿವನಿಗನಿಸುತ್ತಿತ್ತು. ತಾನು ಹೋಗಿ ಅವನನ್ನು ಮಾತನಾಡಿಸಲೇ ಎಂದೂ ಶಿವನೂಹಿಸಿದನು. ಆದರೆ ಹಾಗೆ ಮಾಡಲು ಅವನಿಗೆ ಧೈರ್ಯ ಬರಲಿಲ್ಲ. ಮುನಿಸ್ವಾಮಿ ಬಾಯಿಗೆ ಬಂದಂತೆ ಬಯ್ಯಲು ತೊಡಗಿದರೆ ?

ಶಿವನ್ ಗೇಟನ್ನು ದಾಟಿ, ಹೂದೋಟವನ್ನು ಹಾದು ತನ್ನ ಕೋಣೆಯನ್ನು ಪ್ರವೇಶಿಸುವುದರಲ್ಲಿದ್ದನು

"ಶಿವನ್ !" ಎಂಬ ಅಚ್ಚರಿಯ ಕೂಗು ಅವನನ್ನು ತಡೆಹಿಡಿದು ನಿಲ್ಲಿಸಿತು. ಶೀಲೆ ಅವನೆಡೆಗೆ ಓಡಿ ಬರುತ್ತಿದ್ದಳು.

ಶಿವನ್ ನಿಂತು ಶಾಂತವಾಗಿ ಕೇಳಿದನು:

"ಏನು ಶೀಲಮ್ಮ ?"

"ಶಿವನ್, ನಿನಗೇಕೆ ಈ ಆಫೀಸ್ ಬಾಯ್‌ನ ವೇಷ ? ನಿನಗೀ ಕೆಲಸ ಕೊಟ್ಟವರಾರು ?"

ಹರಿತವಾದ ಚೂರಿಯನ್ನು ಹೃದಯದೊಳಕ್ಕೆ ಚುಚ್ಚಿ ಕರಕರನೆ ಕೊಯ್ದಂತಾಯಿತು ಶಿವನಿಗೆ. ದುಃಖ ಉದ್ವೇಗದಿಂದ ಅವನು ಆರ್ತನಾಗಿ ಹೇಳಿದನು:

“ಯಾರು ಎಂದು ನನ್ನನ್ನೇಕೆ ಕೇಳುವಿ ಶೀಲೆ?”

“ನಾನು ತಂದೆಯೊಡನೆ ನಿನಗೆ ಕ್ಲಾರ್ಕನ ಕೆಲಸ ಕೊಡಲು ಹೇಳಿದ್ದೆ ಶಿವನ್!” ಶೀಲೆ ಬೆರಳು ಕಚ್ಚಿಕೊಂಡು ಕೂಗಿದಳು. ಅವಳ ಕಣ್ಣುಗಳು ಆಗಲೇ ಜಲಮಯವಾಗಿದ್ದವು. ತುಸು ತಡೆದು ಬಿಕ್ಕಳಿಸುತ್ತಾ ಕೇಳಿದಳು:

“ಈ ಅಪಮಾನದ ಕೀಳು ವೇಷವನ್ನು ವಿದ್ಯಾವಂತನಾದ ನೀನು ಹೇಗೆ ಧರಿಸಿಕೊಂಡೆ ಶಿವನ್?”

ಉಕ್ಕೇರುವ ದುಃಖವನ್ನು ಒತ್ತಿ ಹಿಡಿಯುತ್ತಾ ಶಿವನ್ ಕೂಗಾಡಿದ.

“ಇಂತಹ ಪ್ರಶ್ನೆಗಳನ್ನು ಕೇಳಿ ನನ್ನ ಹೃದಯವನ್ನು ಇರಿಯಬೇಡ ಶೀಲಾ!”

ಶಿವನಿಗೆ ಅಲ್ಲಿ ನಿಲ್ಲಲಾಗಲಿಲ್ಲ. ನೇರವಾಗಿ ತನ್ನ ಕೋಣೆಗೋಡಿಬಿಟ್ಟನು. ಬಾಗಿಲನ್ನು ಮುಚ್ಚಿ ಬೆಂಚನ್ನಾಶ್ರಯಿಸಿಕೊಂಡನು.

ಶೀಲೆ ಮನೆಯೊಳಗೋಡಿದಳು.

---

## ೧೨

ಶೀಲೆ ತನ್ನ ತಂದೆಯ ಕೋಣೆಯನ್ನು ರಭಸದಿಂದ ಪ್ರವೇಶಿಸಿದಳು.

ಚೆಟ್ಟಿಯಾರರು ಕಾಫಿ ಕುಡಿಯುತ್ತಾ ಯಾವದೋ ಲೆಖ್ಖ-ಪತ್ರ ಒಂದನ್ನು ಪರಿಕಿಸುತ್ತಿದ್ದರು. ಶೀಲೆ ಅವರ ಬಳಿಗೆ ನಡೆದು ನಿಂತಳು. ಅವಳ ಮುಖ ಉದ್ವೇಗದಿಂದ ಆರಕ್ತವಾಗಿತ್ತು. ತುಟಿಗಳು ನಡುಗುತ್ತಿದ್ದವು.

“ಅಪ್ಪಾ!” ಎಂದವಳು ಕೂಗಿದಳು.

ಆಕಸ್ಮಿಕವಾದ ಈ ಉದ್ವಿಗ್ನದ ಕೂಗು ಚೆಟ್ಟಿಯಾರರ ಕೈಯನ್ನು ನಡುಗಿಸಿತು. ತುಟಿಗಳೆಡೆಗೆ ಕೊಂಡೊಯ್ಯುತ್ತಿದ್ದ ಕಾಫಿ ತುಂಬಿದ ಕಪ್ಪು ನಡುಗಿ, ಎರಡುಮೂರು ಬಿಂದುಗಳಷ್ಟು ಕಾಫಿ ಅವರ ಧೋತರದ ಮೇಲೆ ಚೆಲ್ಲಿತು.

" ಆಂ! " ಎಂದು ಮುಖವೆತ್ತಿ ಮಗಳನ್ನು ನೋಡಿದರವರು ಒಬ್ಬಳೇ ಮಗಳು. ಪ್ರೀತಿಯಿಂದ ಬೆಳೆಯಿಸಿದ ಹುಡುಗಿ ಚೆಟ್ಟಿಯಾರ ರಿಗೆ ಮಗನೂ ಮಗಳೂ ಅವಳೊಬ್ಬಳೇ. ಆದ್ದರಿಂದ ಕಾಫಿ ಉಟ್ಟ ವಸ್ತ್ರದ ಮೇಲೆ ಬಿದ್ದರೂ ಅವರು ಕ್ರೋಧವಶರಾಗುವಂತಿಲ್ಲ. ಮಗಳ ಉದ್ವಿಗ್ನತೆಯನ್ನು ಕಂಡಾಗ ಮಾತ್ರ ಅವರಿಗೆ ಕಳವಳವಾಯಿತು.

" ಏನು ? ಏನು ಶೀಲಾ ? " ಕೇಳಿದರವರು.

" ಶಿವನಿಗೆ ನೀವು ಕ್ಲಾರ್ಕನ ಕೆಲಸ ಕೊಡಿಸಬೇಕೆಂದು ನಾ ಹೇಳಿದ್ದೆ ನಲ್ಲಪ್ಪಾ ? "

" ಹೌದು. ಆದರೆ...."

" ಆದರೆ ಎಂದೇನಪ್ಪಾ ! ಅವನಿಗೆ ನನ್ನಷ್ಟೇ ಜ್ಞಾನವಿದೆ ಎಸ್. ಎಸ್. ಎಲ್. ಸಿ. ಗೆ ಅವನು ಕೂಡದಿದ್ದರೂ ಅಷ್ಟು ಯೋಗ್ಯತೆಯಿದೆ ಅವನಿಗೆ !...."

" ಆದರೆ ನೋಡು ಶೀಲಾ...."

" ಈಗ ಮಾತ್ರ ಆದರೆ ಎಂದೇಕೆ ಹೇಳುತ್ತೀರಿ ಅಪ್ಪಾ ? ಅವನಿಗೆ ಕ್ಲಾರ್ಕನ ಕೆಲಸ ಕೊಡಿರೆಂದು ನಾ ಕೇಳಿದಾಗ ನೀವು ಹೂಂ ಎಂದಿರಿ. ಈಗ ಮಾತ್ರ ಅವನಿಗೆ ಪೇದೆಯ ಕೆಲಸವನ್ನು ಕೊಟ್ಟು ಬಿಟ್ಟಿರಿ ! "

" ನನಗೆ ಮಾತನಾಡಲು ಎಡೆಗೊಡು ಶೀಲೆ !.... ನೋಡು ಅವನು ಯಸ್ಸೆಸ್ಸೆಲ್ಸಿ ಪಾಸಾಗಿಲ್ಲ...."

" ಆದರೆ ಅವನಿಗೆಷ್ಟು ಜ್ಞಾನವಿದೆಯಪ್ಪಾ ! "

" ಒಂದುವೇಳೆ ಅವನಿಗೆ ಅಷ್ಟು ಜ್ಞಾನವಿದ್ದರೆ ಕೆಲಸ ಕೊಡಬಹು ದಿತ್ತು. ಆದರೆ ನೋಡು ಶೀಲೆ, ಅವನು ನಮ್ಮ ಮನೆಯ ಕೆಲಸದಾಳು ಆಗಿದ್ದನು. ಅವನನ್ನು ನನ್ನದೇ ಬ್ಯಾಂಕಿನ ಗುಮಾಸ್ತನ ಕುರ್ಚಿಯಲ್ಲಿ ಹೇಗೆ ಕುಳ್ಳಿರಿಸಲಿ ಶೀಲೆ? "

" ಕೆಲಸದಾಳು ಆಗಿದ್ದರೇನು ? ಅವನು ವಿದ್ಯಾವಂತನಲ್ಲ ವೇನಪ್ಪಾ ? "

" ಹೌದು ಮಗಳೇ ! " ಶೀಲೆಯ ಬೆನ್ನನ್ನು ತಟ್ಟುತ್ತಾ ಚೆಟ್ಟಿಯಾರರು ಅನುಕಂಪದಿಂದ ಅಂದರು: " ಕ್ಲಾರ್ಕನ ಕೆಲಸಕ್ಕೆ ಅವನು ಯೋಗ್ಯನು ಹೌದು. ನಾನು ಅಲ್ಲವೆಂದಿದ್ದೇನೆಯೇ ? ಆದರೆ ಮಗಳೇ, ನಾವು ನಮ್ಮ ಘನಸ್ಥಿಕೆಗೆ ಕುಂದು ಬಾರದಂತೆ ವರ್ತಿಸಬೇಕಲ್ಲವೇ ? ಮನೆಯ ಕೆಲಸದ ಹುಡುಗನನ್ನು ಬ್ಯಾಂಕಿನ ಕೌಂಟರಿನ ಹಿಂದೆ ಕುಳ್ಳಿರಿಸಿದರೆ ಯಾರಾದರೂ ಏನು ಹೇಳಿಯಾರು ? ಸಮಾಜದಲ್ಲಿ ಆಯಾಯ ಸ್ಥಾನದಲ್ಲಿರುವವರು ಆಯಾಯ ಸ್ಥಾನದಲ್ಲಿರಬೇಕು. ಕತ್ತಿಯನ್ನು ಕುಮರಿಯ ಸ್ಥಾನಕ್ಕೆಳೆದು ತಂದು ಉಪಯೋಗಿಸುತ್ತೇನೆ ಅಂದರೆ ಆದೀತೇ ಶೀಲೆ ? ಹುಚ್ಚರು ಎಂದು ಯಾರಾದರೂ ಹೇಳಲಿಕ್ಕಿಲ್ಲವೇ ? "

" ಅಪ್ಪಾ ! " ಏನು ಹೇಳಲೆಂದು ತಿಳಿಯದೆ ಶೀಲೆ ಅಳಹತ್ತಿದಳು.

" ಛೀ ! ಛೀ ! " ಶೀಲೆಯನ್ನು ಅಪ್ಪಿಕೊಂಡು, ಅವಳ ಕಣ್ಣೀರನ್ನು ಒರೆಸುತ್ತಾ ಚೆಟ್ಟಿಯಾರರು ಅಂದರು: " ಹುಚ್ಚು ಹುಡುಗಿ ಅಂದರೆ ನೀನೇ ಶೀಲೆ ! ಅಲ್ಲಾ— ಇದಕ್ಕೆಲ್ಲ ಅಳುವುದುಂಟೇ ಎಲ್ಲಿಯಾದರೂ ! ಶಿವನಿಗೆ ಯೋಗ್ಯವಾದ ಕೆಲಸ ನಾ ಕೊಟ್ಟಿದ್ದೇನೆ. ಅದು ಕೂಡ ಎಲ್ಲಾ ಪೇದೆಗಳಿಗಿಂತ ಐದು ರೂಪಾಯಿ ಹೆಚ್ಚೇ ಸಂಬಳ ಅವನಿಗೆ ಕೊಡಲು ನಿಶ್ಚೈಸಿದ್ದೇನೆ. ಶಿವನು ನಮ್ಮ ಮನೆಗೆ ಬಾರದೆ ಇರುತ್ತಿದ್ದರೆ ಎಲ್ಲಿಯೋ ರಿಕ್ಷಾ ಎಳೆದುಕೊಂಡು ಇರುತ್ತಿದ್ದ. ಆದರೂ ಕನಿಕರದಿಂದ ಅವನಿಗೆ ಯೋಗ್ಯವಾದ ಕೆಲಸವನ್ನು ಕೊಟ್ಟಿದ್ದೇನೆ. ಸಾಲದೇ ಅದು ? "

ಶೀರೆಗೆ ಏನು ಹೇಳಲೆಂದು ತಿಳಿಯಲಿಲ್ಲ. ಶಿವನಿಗಾಗಿ ಅವಳ ಹೃದಯವೇಕಿಷ್ಟು ಬಡಿದುಕೊಳ್ಳುತ್ತಿದೆ ? ಇಲ್ಲಿಗೆ ಬಾರದಿರುತ್ತಿದ್ದರೆ ಅವನು ರಿಕ್ಷಾವಾಲನಾಗುತ್ತಿದ್ದ. ಹೌದು. ಅಂಥವನಿಗೆ ಆಫೀಸ್ ಬಾಯ್‌ಯ ಕೆಲಸವೇ ಯೋಗ್ಯವಷ್ಟೇ ? ಶೀಲೆಯ ಮನಸ್ಸು ಸೂಚಿಸಿತು ಆದರೆ ಹೃದಯಾಂತರಾಳದಿಂದ ಇನ್ನೊಂದು ಪ್ರಶ್ನೆ ಬಂತು. ಶಿವನ್ ವಿದ್ಯಾವಂತನಾಗಿಲ್ಲವೇ ? ಒಂದುವೇಳೆ ತಂದೆಯವರೇ ಶ್ರೀಮಂತರ ಮಗನಾಗದಿರುತ್ತಿದ್ದರೆ ರಿಕ್ಷಾವನ್ನೇ ಎಳೆಯಬೇಕಿತ್ತಲ್ಲ ? ಯಾವ ರಿಕ್ಷಾವಾಲನೇ ಆಗಿರಲಿ ವಿದ್ಯಾವಂತನಾಗಿ, ಸುಸಂಸ್ಕೃತನಾದರೆ, ಅವನಿಗೆ ಸಮಾಜದಲ್ಲಿ ಉತ್ತಮ ಸ್ಥಾನಕ್ಕೇರಲು ಹಕ್ಕಿಲ್ಲವೇ ? ಬಡವರಾಗಿ ಹುಟ್ಟಿದರೆ ಸಾಯುವ ತನಕ ಬಡವರಾಗಿಯೇ ಇರಬೇಕೇನು ? ಅವರಿಗೆ ಸಿರಿ

ಮಂತನಾಗಲು, ಜೀವನ ಕ್ರಮದಲ್ಲಿ ಉತ್ತಮ ಮಾರ್ಗವನ್ನವಲಂಬಿಸಲು ಹಕ್ಕೇ ಇಲ್ಲವೇನು ?

" ನೀನು ನಿನ್ನ ಕೋಣೆಗೆ ಹೋಗಿ ಓದು ನೋಡು ಶೀಲೆ ! " ಚೆಟ್ಟಿಯಾರರು ಪ್ರೇಮಲವಾಗಿಯೇ ಹೇಳಿದರು. " ಓದಲಿಕ್ಕೆ ಬೇಸರ ವಾಗುತ್ತದೇನು ? ಹಾಗಾದರೆ ಒಂದು ಸಿನಿಮಾಕ್ಕೆ ಹೋಗು. ಡ್ರಾಯ ವರನಿಗೆ ಹೇಳುತ್ತೇನೆ, ನಿನ್ನನ್ನು ಥಿಯೇಟರಿನಲ್ಲಿ ಬಿಟ್ಟು ಬರಲಿಕ್ಕೆ...."

" ನಾನು ಸಿನಿಮಾಕ್ಕೆ ಹೋಗುವುದಿಲ್ಲಪ್ಪಾ ! " ಖಿನ್ನ ಸ್ವರದಿಂದ ಅಂದಳಾಕೆ.

" ಹಾಗಾದರೆ ಸುಮ್ಮನೆ ನಿನ್ನ ಕೋಣೆಗೆ ಹೋಗಿ ಓದು. ಇಲ್ಲದ ಸಲ್ಲದ ವಿಷಯಗಳನ್ನು ಚಿಂತಿಸಿ ತಲೆ ಕೆಡಿಸಿಕೊಳ್ಳಬೇಡ ಶೀಲಾ ! ಅವ ನಿಗೆ ಸರಿಯಾದ ಕೆಲಸವನ್ನು ನಾ ಕೊಟ್ಟಿದ್ದೇನೆ. ಅದಕ್ಕಿಂತ ಹೆಚ್ಚಿನದು ಕೊಟ್ಟರೆ ಅದು ಚೆಂದವಲ್ಲ ! " ಕರುಣೆಯ ಧ್ವನಿಯಲ್ಲಿ ಚೆಟ್ಟಿಯಾರರು ಮುಂದುವರಿಸಿದರು—" ನಿನ್ನೆ ಹಿಗಿನ್ ಬೋತಮ್ಸದಿಂದ ಕೆಲವು ಕತೆ ಪುಸ್ತಕಗಳನ್ನು ನಾ ತಂದಿದ್ದೇನಲ್ಲ; ಅವನ್ನು ನೋಡಿದೆಯೋ ಹೇಗೆ ? ಹೋಗಿ ಅವನ್ನೆಲ್ಲ ಓದು ನೋಡಮ್ಮ ! "

ಶೀಲೆ ಕೋಣೆಯಿಂದ ಹೊರಬಂದಳು. ಕೋಣೆಯನ್ನು ಪ್ರವೇಶಿ ಸುವಾಗ ಅವಳೆಷ್ಟು ಉದ್ವಿಗ್ನಳಾಗಿದ್ದಳೋ, ಅಷ್ಟೇ ಅವಳ ಮನಸ್ಸು ಇದೀಗ ಚಿಂತಾಕುಲವಾಗಿತ್ತು. ಭಾರವಾದ ಹೆಜ್ಜೆಗಳನ್ನಿಡುತ್ತ ಅವಳು ತನ್ನ ಕೋಣೆಗೆ ನಡೆದಳು. ತಂದೆಯ ಕೋಣೆಯಿಂದ ಹೊರಬಂದಾಗ, ತಾಯಿ ಬಾಗಿಲಲ್ಲಿ ನಿಂತುಕೊಂಡುದು, ತಾನು ಹೊರ ಬಂದ ಮೇಲೆ ಅವಳು ಒಳಗೆ ಹೋದುದು ಶೀಲೆಗೆ ತಿಳಿದರೂ, ಅವಳು ಒಗ್ಗಿಸಿದ ತಲೆ ಯನ್ನು ನೆಗ್ಗಲಿಲ್ಲ... "

ಶೀಲೆ ಚೆಟ್ಟಿಯಾರರ ಕೋಣೆಯಿಂದ ಹೊರಬಿದ್ದ ಕೂಡಲೇ, ಬಾಗಿ ಲಲ್ಲಿ ನಿಂತು ತಂದೆ–ಮಗಳ ಸಂವಾದವನ್ನು ಕೇಳುತ್ತಿದ್ದ ತಾಯಿ ಒಳಗೆ ನಡೆದರು. ಪತಿಯ ಬಳಿ ಸರಿದು, ಎದುರಿನ ಕುರ್ಚಿಯಲ್ಲಿ ಕುಳಿತು ಕೊಳ್ಳುತ್ತ ಹೇಳಿದರು:

" ಏಕೋ ಶೀಲೆಯ ಸ್ವಭಾವ ವಿಚಿತ್ರವಾಗಿದೆ ! ಕೇಳ್ರಿ, ಅಲ್ಲಾ–ಕೆಲಸದ ಹುಡುಗನ ಬಗ್ಗೆ ಇವಳೇಕೆ ಇಷ್ಟು ಅಳಬೇಕೆಂದು ನಾ ಕೇಳ್ತೇನೆ ! ಇದು ಚೆಂದವಾಗಿ ಕಾಣಿಸುವುದಿಲ್ಲ ! "

"ಆಂ? ಏನು ಹೇಳಿದಿ? ಹೌದು! ಹೌದು!...." ಲೆಖ್ಖ ಪತ್ರದಲ್ಲಿ ಪುನಃ ಮುಳುಗಿದ ಚೆಟ್ಟಿಯಾರರು ತಲೆ ನೆಗ್ಗಿ ಉಸುರಿದರು.

"ಲೆಖ್ಖ ಪತ್ರವನ್ನು ಸ್ವಲ್ಪ ಮತ್ತೆ ನೋಡಿರಿ! ಈಗ ನಾ ಹೇಳು, ವುದಕ್ಕೆ ಸ್ವಲ್ಪ ಮನಸ್ಸು ಕೊಡಿರಲ್ಲ?...." ಅಮ್ಮಾವರು ಬಿಗುವಿನಿಂದ ಅಂದರು.

"ಏನಪ್ಪಾ? ಏನಾಗಬೇಕಾಗಿದೆ ನಿನಗೀಗ?"

"ಅಲ್ಲಾ— ಹೇಳಿದರೆ ನೀವು ಕೇಳುವುದೇ ಇಲ್ಲ! ನೋಡಿ, ಶೀಲಿ ಆ ಶಿವನೊಡನೆ ಬಹಳ ಸಲಿಗೆಯಿಂದ ಇದ್ದಾಳೆ. ಇದೇನೂ ಒಳ್ಳೆಯ ಲಕ್ಷಣವಲ್ಲ!"

"ಪಾಪ! ಸಣ್ಣ ಹುಡುಗಿ!" ಚೆಟ್ಟಿಯಾರರುದ್ಗರಿಸಿದರು.

"ಪ್ರಾಯ ಹದಿನಾರು ಕಳೆಯಿತು. ಇನ್ನೂ ಸಣ್ಣವಳೇ? ನಾನು ಹೇಳುವುದು ಕೇಳಿರಿ. ಇವಳನ್ನು ಆ ಶಿವನೊಡನೆ ಸಲಿಗೆಯಿಂದಿರಲು ಬಿಡಬಾರದು. ನನಗೇನೂ ಚೆಂದ ಕಾಣಿಸುವುದಿಲ್ಲ."

"ನಾನೂ ಒಂತೆರಡು ಬಾರಿ ಆ ಬಗ್ಗೆ ಚಿಂತಿಸಿದೆ." ತಲೆ ಕೆಳಗೆ ಹಾಕಿ ಗಂಭೀರವಾಗಿ ಚೆಟ್ಟಿಯಾರರು ನುಡಿದರು. "ಆದರೆ ಏನು ಮಾಡಲಿ? ಜೋರು ಮಾಡಿ ಅವಳನ್ನು ನೋಯಿಸಲು ಮನಸ್ಸೊಪ್ಪು ವುದಿಲ್ಲ."

"ಅದೂ ನಿಜವೇ." ಶೀಲೆಯ ತಾಯಿ ಹೇಳಿದರು. "ಅದಕ್ಕೊಂ ದುಪಾಯ ಮಾಡಬಹುದು. ಮುಂದಿನ ವಾರ ನನ್ನಣ್ಣ ಮುಂಬಯಿ ಯಿಂದ ಬರುತ್ತಾನಂತೆ. ಅವನೊಡನೆ ಶೀಲೆಯನ್ನು ಮುಂಬಯಿಗೆ ಕಳುಹಿಸುವ. ಒಂದೆರಡು ತಿಂಗಳು ಅಲ್ಲಿದ್ದು ಬರಲಿ ಎಲ್ಲ ಸರಿ ಹೋಗುವುದು...."

"ಹಾಂ! ಅವಳ ಯಸ್ಸೆಸ್ಸೆಲ್ಸಿ ಫಲಿತಾಂಶ ಬೇಗನೇ ಬಂದೀತು. ಅನಂತರ ಅವಳನ್ನು ಕಾಲೇಜಿಗೆ ಕಳುಹಿಸ ಬೇಕಲ್ಲ?" ಚೆಟ್ಟಿಯಾರ ರಂದರು.

"ಕಾಲೇಜು ಯಾಕೆ ಸುಮ್ಮನೆ? ಇಷ್ಟು ಕಲಿತುದು ಸಾಲದೇ?" ತುಸು ನಗುತ್ತಾ ಶೀಲೆಯ ತಾಯಿ ಮುಂದುವರಿಸಿದರು—"ನೋಡಿ. ಇನ್ನು ಹದಿನೈದು ದಿನಗಳಲ್ಲಿ ರಂಗನಾಥ ಇಂಗ್ಲೆಂಡಿನಿಂದ ಕಲಿಯುವಿಕೆ

ಮುಗಿಸಿ ಹಿಂದೆ ಬರುತ್ತಾನೆ ಶೀಲೆಯೂ ಅವನೊಡನೆ ನಾಲ್ಕು ದಿನಗಳಿದ್ದರೆ ಒಳ್ಳೇದು. ಅವನಿಗೇ ಶೀಲೆಯನ್ನು ಕೊಡುವುದೆಂತ ನಾವು ಮೊದಲೇ ಮಾತನಾಡಿಕೊಂಡಿದ್ದೇವಲ್ಲಾ ? "

ಚೆಟ್ಟಿಯಾರರು ನಕ್ಕರು. ತುಂಬು ಹರುಷದಿಂದ ಅವರೆದೆ ಉಬ್ಬಿಕೊಂಡಿತು ಇಂಗ್ಲೆಂಡಿನಲ್ಲಿ ಕಲಿಯುವಿಕೆ ಮುಗಿಸಿದ ಅಳಿಯ ! ಹಗಲು ಗನಸಿನ ಸುಖದ ಗುಂಗಿನಲ್ಲಿ ಅವರು ಮೈಮರೆತರು. ಸುಖದಿಂದ ಕುರ್ಚಿಯಿಂದ ತಟ್ಟನೆದ್ದು ಹೇಳಿದರು:

" ನೀನಂದದು ಸರಿ ! ಹಾಗೇ ಮಾಡೋಣ ! "

* * * * *

ಭಾರವಾದ ಹೆಜ್ಜೆಗಳನ್ನಿಡುತ್ತಾ ಶೀಲೆ ತನ್ನ ಕೋಣೆ ಸೇರಿದಳು. ಅವಳ ಮನಸ್ಸು ಭಾರವಾಗಿತ್ತು. ಶಿವನ ಬಗ್ಗೆ ತಾನೇಕೆ ಇಷ್ಟು ಕಳವಳ ಪಡುತ್ತೇನೆ ಎಂದವಳು ತನ್ನನ್ನು ತಾನೇ ಕೇಳಿಕೊಂಡಳು ಕೂಡ. ಅವನು ಮನೆಯ ಕೆಲಸದಾಳು. ತಾನು ಮನೆಯ ಒಡತಿ. ಅವನೇನಾದರೆ ತನಗೇನು ಬಂದ ನಷ್ಟ? ಅವನಿಗೇನು ಬೇಕಾದರೂ ಆಗಲಿ ತಾನೇಕೆ ಆ ಬಗ್ಗೆ ಕಾತರಗೊಳ್ಳಬೇಕು? ರಿಕ್ಷಾ ಎಳೆಯಬೇಕಾಗುತ್ತಿದ್ದ ಅವನಿಗೆ ಪೇದೆಯ ಕೆಲಸ ಸಾಲದೇ ? ಗುಮಾಸ್ತನ ಹುದ್ದೆಯೇತಕ್ಕೆ ? ಆದರೆ ಅವನು ವಿದ್ಯಾವಂತನಲ್ಲವೇ ? ತನ್ನಷ್ಟೇ ಅವನಿಗೂ ಜ್ಞಾನ ವಿಲ್ಲವೇ ?........ ಶೀಲೆಯ ಮನವನ್ನು ಆಲೋಚನೆಗಳ ಮೋಡಗಳು ಕವಿದುವು. ಅವಳಿಗೆ ದಿಕ್ಕುಗಾಣದಾಯಿತು. ಮನಸ್ಸು ಕತ್ತಲಲ್ಲೇ ಅತ್ತಿತ್ತ ಚಡಪಡಿಸತೊಡಗಿತು.

" ಛೀ ! ಛೀ ! ನಾನೇಕೆ ಇಷ್ಟು ಕಾತರಗೊಳ್ಳಬೇಕು ಅವನಿಗಾಗಿ ? ಅವನು ಮನೆಯ ಕೆಲಸದವನು ! ಕೂಲಿಯಾಳು ! " ಶೀಲೆ ಕೂಗಿಕೊಂಡಳು ಮನದಲ್ಲೇ.

" ಕೂಲಿಯಾಳಾದರೇನಾಯಿತು ? ಅವನು ವಿದ್ಯಾವಂತನಲ್ಲವೆ ? " ಹೃದಯಾಂತರಾಳದಿಂದ ಪ್ರಶ್ನೆಯೊಂದು ಹೊರಬಂತು.

" ಆದರೆ ಕತ್ತೆ ಕತ್ತೆಯೇ ಅಲ್ಲವೇ ? ಕುದುರೆಯಾದೀತೇ ? " ಮನಸ್ಸು ಮರುಸವಾಲು ಹಾಕಿತು.

"ಕತ್ತೆ ಕುದುರೆಯಾಗಲಿಕ್ಕಿಲ್ಲ. ಕುದುರೆ ಕತ್ತೆಯಾಗಲಿಕ್ಕಿಲ್ಲ. ಆದರೆ ಆ ಪ್ರಾಣಿ ವರ್ಗದ ಉಪಮೆ ಇದಕ್ಕೆ ಸರಿ ಹೋಗಲಾರದು. ಮೃಗವಾದ ಮಾನವ ವಿದ್ಯೆಯಿಂದಲೇ ಮನುಷ್ಯನೆನಿಸುತ್ತಾನೆ. ಶಿವನ್ ಮನುಷ್ಯನಾಗಿದ್ದಾನೆ. ಅವನಿಗೆ ಅದಕ್ಕೆ ಯೋಗ್ಯವಾದ ಸ್ಥಾನ ಕೊಡಲಿಕ್ಕೇ ಬೇಕು...." ಒಳದನಿ ಮತ್ತೆ ಹೇಳಿತು

"ಕೀಳು ವರ್ಗದವನನ್ನು ಎತ್ತಿ ಉತ್ತಮ ಸ್ಥಾನದಲ್ಲಲಂಕರಿಸಿದರೆ ಅದು ಸರಿಯೇ? ಯಾರಾದರೂ ನಗದೆ ಬಿಟ್ಟಾರೇ?" ಮನಸ್ಸು ಗಡಚು ಪ್ರಶ್ನೆಯನ್ನು ಬಿಗಿಯಿತು.

"ವರ್ಗಭೇದ ವ್ಯಕ್ತಿಯ ನಡೆವಳಿಕೆಯಲ್ಲಿದೆ ಅವನ ಹೃದಯದ ರೂಪದಲ್ಲಿದೆ. ಅವನ ಮನಸ್ಸಿನ ಸಂಸ್ಕೃತಿಯಲ್ಲಿದೆ ಹೊರತು ಹಣದಲ್ಲಿಲ್ಲ. ಗತಿ ಗೋತ್ರದಲ್ಲಿಲ್ಲ ಆದ್ದರಿಂದ ಶಿವನ್ ಉತ್ತಮ ವರ್ಗದವನಿದ್ದಾನೆ" ಅಂತರಾಳದ ದನಿ ಹೇಳಿತು.

"ಅಯ್ಯೋ! ಮನೆಯ ಕೂಲಿಯಾಳಿನ ಬಗ್ಗೆ ನೀನೇಕೆ ಇಷ್ಟು ಕಷ್ಟಪಡುತ್ತೀ? ಇಷ್ಟು ಕಳಕಳಿಸುತ್ತೀ? ಏನು ಕತೆ ಇದು? ಹಿ.... ಹಿ.... ಹಿ...." ಸೋತ ಮನಸ್ಸು ವ್ಯಂಗವಾಗಿ ಪ್ರಶ್ನೆ ಹಾಕಿತು.

ಆ ಪ್ರಶ್ನೆಗೆ. ಶೀಲೆಗೆ, ಉತ್ತರ ದೊರೆಯಲಿಲ್ಲ. ದಿಕ್ಕುಗಾಣದೆ ಅವಳ ಹೃದಯ ಚೂರು ಚೂರಾದಂತಾಯಿತು. ಈ ವೇದನೆ ಯಾಕೆ? ಈ ಕಣ್ಣೀರೇಕೆ? ಈ ಕಳವಳವೇತಕ್ಕೆ? ಶೀಲೆ ಕುಳಿತಲ್ಲಿ ಕುಳಿತಿರದಾದಳು.

ಕೋಣೆಯಲ್ಲಿ ಕತ್ತಲೆ ಕವಿದಿತ್ತು. ಶೀಲೆಯ ಮನದೊಳಗೆ ಅದಕ್ಕಿಂತಲೂ ದಟ್ಟವಾದ ಕತ್ತಲೆ. ಆ ಕತ್ತಲೆಯನ್ನು ಶೀಲೆ ಸಹಿಸದಾದಳು. ಕುರ್ಚಿಯಿಂದೆದ್ದು ದೀಪದ ಗುಂಡಿಯನ್ನೊತ್ತಿದಳು. ಕೋಣೆಯೊಳಗಿನ ಕತ್ತಲನ್ನು ವಿದ್ಯುತ್ ದೀಪದ ಬೆಳಕು ಹೊಡೆದೋಡಿಸಿತು. ಆದರೆ ಮನದ ಕತ್ತಲೆ? ಶೀಲೆಗೆ ನಿಂತಲ್ಲಿ ನಿಂತುಕೊಳ್ಳಲಾಗಲಿಲ್ಲ. ಕೋಣೆಯಲ್ಲಿ ಅತ್ತಿಂದಿತ್ತ ಲಾಲಿ ಹಾಕಿದಳು. ನಡೆಯಲೂ ಅವಳಿಂದಾಗಲಿಲ್ಲ. ಕಿಟಕಿಯ ಬಳಿ ಬಂದು ನಿಂತುಕೊಂಡಳು.

ಹೂದೋಟವನ್ನು ಸುಳಿದು ಬಂದ ಸೌರಭಯುತವಾದ ಶೀತಳ ಗಾಳಿ ಅವಳ ಮುಖದ ಮೇಲೆ ಬೀಸಿ ಮುಂಗುರುಳುಗಳನ್ನು ತೀಡಿತು.

ತಲೆಗೂದಲು ಗಾಳಿಯೊಡನೆ ಸ್ವಚ್ಛಂದವಾಗಿ ಲಾಸ್ಯವಾಡಿ ಹಣೆಯ ಮೇಲೆಲ್ಲ ಚೆಲ್ಲಿಕೊಂಡುವು. ಶೀಲೆ ಕಿಟಕಿಗೊರಗಿ ಹಾಗೇ ನಿಂತಳು. ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯಿತು. ಅದನ್ನೊರಸಿ ಕೊಳ್ಳುವ ಗೋಜಿಗೂ ಶೀಲೆ ಹೋಗಲಿಲ್ಲ.

" ಇಂತಹ ಪ್ರಶ್ನೆಗಳನ್ನು ಕೇಳಿ ನನ್ನ ಹೃದಯವನ್ನು ಇರಿಯ ಬೇಡ, ಶೀಲಾ! ಎಂದು ಕೂಗಾಡಿ ತನ್ನ ಕೋಣೆಗೋಡಿ ಬಂದ ಶಿವನ್ ಯೋಚನಾಪ್ರವಾಹದಲ್ಲಿ ಸೆಳೆದೊಯ್ಯಲ್ಪಟ್ಟನು. ಎಂತಹ ಪ್ರವಾಹವದು! ತುಂಬಿದ ನೆರೆ ನೀರ ಸೆಳೆತದಿಂದೊಯ್ಯಲ್ಪಡುವವನಂತೆ ಅವನ ಮನಸ್ಸು ಗಾಸಿಗೊಂಡಿತು. ಬಂಡೆಗಳಿಗೆ ಹೊಡೆಯಲ್ಪಟ್ಟಿತು. ಸುಳಿಗಳಲ್ಲಿ ಸಿಲುಕಿ ಉಸಿರು ಕಟ್ಟಿಸಿಕೊಂಡಿತು; ಪ್ರಪಾತದಿಂದ ಬಿದ್ದು ಜಗ್ಗುಮುಗ್ಗಾಯಿತು. ಮತ್ತೆ ಸಾಗರಕ್ಕೆ ಸೇರುವಲ್ಲಿ ಸೆಳೆತ ಕಡಮೆಯಾಗುವಂತೆ, ಅವನ ಮನಸ್ಸು ಸ್ಥಿಮಿತಕ್ಕೆ ಬರಹತ್ತಿತು.

" ನಾನು ಯಾರು ? " ತನ್ನನ್ನೇ ಕೇಳಿಕೊಂಡನವನು.

" ಕಶ್ಚಿತ್ ಕೆಲಸದಾಳು ! "

" ನಾನು ಕಲಿಯದಿದ್ದರೆ ಏನಾಗುತ್ತಿದ್ದೆ ? "

" ರಿಕ್ಷಾವಾಲ ! "

" ಅಂದಮೇಲೆ ಪೇದೆಯ ಕೆಲಸವೇ ಯೋಗ್ಯವಲ್ಲವೇ ? "

" ........ "

" ಗುಮಾಸ್ತನ ಕೆಲಸ ದೊರೆಯದಿದ್ದುದಕ್ಕೆ ನಾನೇಕೆ ಹತಾಶ ನಾಗಬೇಕು ? "

" ಆಶೆಯಿದ್ದುದರಿಂದ "

" ಕೀಳು ವರ್ಗದ ಕೆಲಸದಾಳಿಗೆ ಈ ಆಶೆಯೇಕೆ ? "

" ವಿದ್ಯಾವಂತನಾದುದರಿಂದ "

" ವಿದ್ಯಾವಂತನಾದ ಮಾತ್ರಕ್ಕೆ ಪೇದೆಯ ಕೆಲಸ ಮಾಡಬಾರ ದೆಂದಿದೆಯೇ ? "

" ಇಲ್ಲ ! "

" ಅಂದಮೇಲೆ ಗುಮಾಸ್ತ ಪದವಿಯ ಈ ಹುಚ್ಚೇಕೆ ? "

" ವಿದ್ಯಾವಂತನಾದುದರಿಂದ ಅಂತಹ ಹುಚ್ಚು ಸ್ವಾಭಾವಿಕ "

" ನನ್ನೀ ಹುಚ್ಚನ್ನು ಪ್ರದರ್ಶಿಸಿದರೆ ನನ್ನನ್ನು ಸಲಹಿ ಉದ್ಧಾರ ಮಾಡಿದ ಯಜಮಾನರ ಮನವು ನೋಯಲಿಕ್ಕಿಲ್ಲವೇ ? "

" ನೋಯಲಿಕ್ಕೂ ಸಾಕು "

" ಮನೆಯ ಕೆಲಸದವನನ್ನು ತಮ್ಮದೇ ಕಛೇರಿಯಲ್ಲಿ ಉನ್ನ ಸ್ಥಾನಕ್ಕೇರಿಸುವುದು ಅವರ ಘನಸ್ಥಿಕೆಗೆ ಕುಂದಲ್ಲವೇ ? "

" ಕುಂದಲ್ಲ; ಆದರೆ ಅವರು ಕುಂದೆಂದು ತಿಳಿದುಕೊಂಡಿರಬಹುದು. "

" ಅವರಂತು ತಿಳಿದುದರಿಂದ, ನಾನಿಂತು ಆಸೆಪಟ್ಟು, ನನ್ನನ್ನು ಸಲಹಿದವನನ್ನು ದುಃಖಕ್ಕೀಡು ಮಾಡಬಹುದೇ ? "

" ಕೂಡದು. "

" ಅವರ ಋಣವನ್ನು ಅವರು ಹೇಳಿದ ಕೆಲಸವನ್ನು ಮಾಡಿ ತೀರಿಸುವುದೇ ಯೋಗ್ಯವಲ್ಲವೇ ? "

" ಹೌದು; ಯೋಗ್ಯ ! ".

" ವಿದ್ಯಾವಂತನಾದ ಮಾತ್ರಕ್ಕೆ ಪೇದೆಯ ಕೆಲಸ ಮಾಡಿದರೆ ಕುಂದೇನೂ ಇಲ್ಲ ! "

ಶಿವನ ಯೋಚನಾ ಪ್ರವಾಹವು ಕೊನೆಗೊಂಡಿತು. ಶಾಂತನಾಗಿ ಶಿವನ್ ಮಲಗಿದಲ್ಲಿಂದ ಎದ್ದು ಹೊರಬಂದನು. ಹೂದೋಟವನ್ನು ಸುಳಿದು ಬಂದ ಸೌರಭಯುತವಾದ ಶೀತಳ ಗಾಳಿ ಅವನ ಮುಖದ ಮೇಲೆ ಬೀಸಿತು. ಕೆದರಿದ ತಲೆಗೂದಲು ಸ್ವಚ್ಛಂದವಾಗಿ ಗಾಳಿಯೊಡನೆ ಲಾಸ್ಯವಾಡಿ ಹಣೆಯ ಮೇಲೆ ಚೆಲ್ಲಿತು. ಶಿವನ ದೃಷ್ಟಿ ಬೆಳಕು ಬರುತಿದ್ದ ಕೋಣೆಯೆಡೆಗೆ ಹೊರಳಿತು.

ಕಿಟಕಿಗೊರಗಿ ಅನಂತ ವೇದನೆಯನ್ನು ಹೊತ್ತು ನಿಂತ ಶೀಲೆಯು ಅವನಿಗೆ ಗೋಚರಿಸಿದಳು. ' ಇಂತಹ ಪ್ರಶ್ನೆಗಳನ್ನು ಕೇಳಿ ನನ್ನ ಹೃದಯವನ್ನು ಇರಿಯಬೇಡ, ಶೀಲಾ ! ' ಎಂಬ ತನ್ನ ಮಾತುಗಳು ಶಿವನಿಗೆ ನೆನಪಿಗೆ ಬಂದವು. ಅವುಗಳಿಂದ ಶೀಲೆ ನೊಂದಿರಬಹುದೇನೋ ಎಂದು ಶಿವನ್ ಚಿಂತಿಸಿದ. ಪೇದೆಯ ಕೆಲಸವೇ ತನಗೆ ಸಂತೋಷದ

ಕೆಲಸವೆಂದು ತಿಳುಹಿಸಬೇಕೆಂದು ಅವನು ನಿಶ್ಚಯಿಸಿ, ಕಿಟಕಿಯ ಬುಡಕ್ಕೆ ನಡೆದು, ಮೆಲ್ಲನೆ, ಮಧುರವಾಗಿ ಕ್ಷಮಾಯಾಚನೆಯ ದೈನ್ಯ ಧ್ವನಿಯಲ್ಲಿ ಅವನು ಕೂಗಿದನು

" ಶೀಲಾ ! "

ಶೀಲೆ ಬೆಚ್ಚಿ ಬಿದ್ದು " ಆಂ ! ಯಾರು ? " ಎಂದು ಕೇಳಿದಳು.

" ನಾನು; ಶಿವನ್ ! " ಶಿವನು ಉಸುರಿದನು.

" ಶಿವನ್........ " ಶೀಲೆಗೆ ದುಃಖವುಕ್ಕಿ ಬಂದಿತು. ಕಣ್ಣುಗಳಲ್ಲಿ ಕಂಬನಿಗಳು ದೀಪದ ಪ್ರಕಾಶಕ್ಕೆ ಪಳಪಳನೆ ಹೊಳೆದುವು.

" ನನ್ನ ಕೆಲಸದಲ್ಲಿ ನನಗೆ ಖುಷಿಯಾಗಿದೆಯೋ ಎಂದು ನೀನು ಕೇಳಿದಿ. ನನಗೆ ಖುಷಿಯಾಗಿದೆ. ಸಂತೋಷವಾಗಿದೆ.... "

" ಶಿವನ್ ! "

" ಆಗ ಏನೋ ಉದ್ವೇಗದಿಂದ ಏನೇನೋ ಅಂದು ಬಿಟ್ಟೆನು. ಆದರೆ ಈಗ ನನ್ನ ಮನಸ್ಸು ತಿಳಿಯಾಗಿದೆ. ನನಗೆ ನನ್ನ ಹೊಸ ಕೆಲಸ ಸರಿಯಾದುದು ಯೋಗ್ಯವಾದುದು "

" ........ "

ಶಿವನ್ ಮೇಲೆ ನೋಡಿದನು. ಶೀಲೆಯ ಕಂಗಳಲ್ಲಿ ಹೊಳೆಯುವ ಕಂಬನಿಗಳು ಅವನಿಗೆ ಕಾಣಿಸಿದುವು. ಶಿವನ್ ಮಾತನಾಡಲಿಲ್ಲ. ಅವನಿಗೆ ಎದೆ ತುಂಬಿ ಬಂದಂತಾಯಿತು. ಶೀಲೆಗೇಕೆ ಇಷ್ಟು ದುಃಖ ಎಂದವನಿಗೆ ತಿಳಿಯಲಿಲ್ಲ. ಆದರೆ ಕೇಳಿ ಅವಳ ದುಃಖವನ್ನು ಕೆದಕಲು ಅವನಿಷ್ಟ ಪಡಲಿಲ್ಲ. ಆದ್ದರಿಂದ ಮೆಲ್ಲನೆ ತನ್ನ ಕೋಣೆಗೆ ಹಿಂದೆ ಬಂದು, ತಾನಿನ್ನೂ ಧರಿಸಿಕೊಂಡಿದ್ದ ' ಬಾಯ್ 'ಯ ವೇಷವನ್ನು ಕಳಚಿದನು; ಮರುದಿನ ಬೆಳಿಗ್ಗೆ ಧರಿಸಲಿಕ್ಕೆ !

---

೧೩

ಶಿವನ್ ಮತ್ತೆ ಪ್ರಫುಲ್ಲವದನನಾದನು. ತನ್ನ ಹೊಸ ಜೀವನವನ್ನು ಒಗ್ಗಿಸಿಕೊಂಡನು. ಬ್ಯಾಂಕಿನ ಜೀವನ ಅವನಿಗೆ ರಮಣೀಯವೆನಿಸಿತು. ಗುಮಾಸ್ತ ವರ್ಗದಲ್ಲೂ ಅವನು ಪ್ರಿಯವಾದನು. ಗೋವಿಂದರಾಜು ಶಿವನನ್ನು ಒಂದು ಬಾರಿ ತನ್ನ ಮನೆಗೆ ಎಳೆದುಕೊಂಡು ಹೋಗದಿರಲಿಲ್ಲ. 'ಮಹಾಮಾರಿ' ಎಂದು ಬಿರುದು ಕೊಟ್ಟ ರಾಜುವಿನ ಹೆಂಡತಿಯ ನಡತೆಯನ್ನು ಕಂಡು ಶಿವನು ಬೆಚ್ಚಿ ಬೀಳದೇ ಇರಲಿಲ್ಲ! ಬ್ಯಾಂಕಿನಿಂದ ಎರಡು ಮೈಲು ದೂರದಲ್ಲಿ ಎಗ್ಮೋರಿನ ಸಮೀಪ ಒಂದು ಅಸಹ್ಯ ಬೀದಿಯ, ಪುರಾತನ ಮನೆಯಲ್ಲೇ ಗೋವಿಂದರಾಜುವಿನ ಬಿಡಾರ. ಆ ಮನೆಯಲ್ಲಿ ಆರು ಕುಟುಂಬಗಳು ವಾಸವಾಗಿದ್ದುವು. ಎಲ್ಲರೂ ಗೋವಿಂದರಾಜುವಿನ ಅಂತಸ್ಥಿನವರೇ. ಅವರಲ್ಲಿ ಇಬ್ಬರು ಕಂಡಕ್ಟರರು. ಇಬ್ಬರು ಯಾವದೋ ಶಾಲೆಯೊಂದರ ಪೇದೆಗಳು. ಇನ್ನೊಬ್ಬ ಚಿಕ್ಕ ಅಂಗಡಿಕಾರ. ಗೋವಿಂದರಾಜು ಅವರೆಲ್ಲರ ವಿಷಯ ಶಿವನಿಗೆ ಹೇಳಿದ್ದನು. ತನ್ನ ಹೆಂಡತಿ ಮತ್ತು ಇತರ ಹೆಂಗಸರು ಇವರೊಳಗೆ ದಿನಾಲು ನಡೆಯುವ ಕಾಳಗಗಳನ್ನು ವಿವರಿಸಿದ್ದನು. ಯಾವದೋ ಪೂರ್ವ ಜನ್ಮದ ಪಾಪದಿಂದ ಆ ಹೆಣ್ಣು ತನ್ನ ಹೆಂಡತಿಯಾದಳು. ಎಂದು ಗೋವಿಂದ ರಾಜು ಕಣ್ಣೀರು ಮಿಡಿದಿದ್ದ. ಅವನ ಜೀವನದ ಕತೆಯನ್ನು – ಕತೆಯಲ್ಲ ಗೋಳನ್ನ–ಶಿವನ್ ಸಹಾನುಭೂತಿಯಿಂದ ಕಿವಿಗೊಟ್ಟು ಕೇಳಿದ್ದನು.

ಆ ಸಹಾನುಭೂತಿಯೇ, ಶಿವನನ್ನು ಗೋವಿಂದರಾಜುವಿನ ಮನೆಯನ್ನು ನೋಡಬಯಸುವಂತೆ ಮಾಡಿತು. ಅಂತೆಯೇ, ಸಂಜೆ ಬ್ಯಾಂಕು ಮುಗಿದ ಅನಂತರ 'ಮನೆಗೆ ಬಾ' ಎಂದು ಗೋವಿಂದರಾಜು ಹೇಳಿದಾಗ, ಶಿವನ್ 'ಹೂಂ' ಅಂದನು ಇಬ್ಬರೂ ಹೊರಟರು. ಮಾತನಾಡುತ್ತಾ ಮುಖ್ಯ ರಸ್ತೆಯಲ್ಲೇ ನಡೆದು, ಓಣಿಯೊಂದರಲ್ಲಿ ಮುಂದೆ ಸರಿದು, ಸಂದೊಂದನ್ನು ಹಾದರು. ನಡೆಯುವುದನ್ನು ತಟ್ಟನೆ ನಿಲ್ಲಿಸುತ್ತಾ ಗೋವಿಂದರಾಜು ಹೇಳಿದ:

"ಶಿವನ್! ಇದೇ ನೋಡು ನನ್ನ ಮನೆ!"

ಗೋವಿಂದರಾಜು ಬಾಗಿಲು ದೂಡಿ ಒಳಗೆ ಸರಿದನು. ಒಳಗೆ ಕಾಲಿಡುತ್ತಲೂ ಹೆಂಗುಸರ ಮಾತುಗಳ ಬಿರುಮಳೆ ಶಿವನ ಕಿವಿಗಳಿಗೆ

ಬಡಿದುಕೊಂಡಿತು. ಮಧ್ಯದಲ್ಲೇ ಇಟ್ಟಿಗೆ ಹಾಕಿದ ಅಂಗಳ. ಅಂಗಳದ ನಾಲ್ಕು ದಿಕ್ಕುಗಳಲ್ಲೂ ಮಾಡು ಇಳಿಸಿ, ಜಗಲಿ ಮಾಡಿದ್ದರು. ಜಗಲಿಯ ಒಳಗಡೆ ಒಂದೊಂದು ಕೋಣೆಗಳು. ಇಷ್ಟೇ ಆರು ಸಂಸಾರಗಳ ಜೀವನಕ್ರಮ ನಡೆಯುವ ಜಾಗ. ಅಂಗಳದ ಒಂದು ಮೂಲೆಯಲ್ಲಿ ನಲ್ಲಿಯಿತ್ತು. ನಲ್ಲಿಯ ಬಳಿ ಆರು ಹೆಂಗುಸರು ಸಂತತವಾದ ವಾಗ್ಯುದ್ಧ ನಡೆಯಿಸುತಿದ್ದರು. ಹಿರಿಯರನ್ನು ಅನುಕರಿಸುತ್ತ, ನಾಲ್ಕಾರು ಬಾಲಕರು ಹೊಡೆದಾಡಿಕೊಳ್ಳುತ್ತಿದ್ದರು. ಒಂದು ಒಣಕಲು ನಾಯಿಮರಿ ಒಂದೇ ಸವನೆ ಬೊಗಳುತ್ತಿತ್ತು. ಶಿವನ್ ಈ ರಣರಂಗವನ್ನು ಕಂಡು ಮುಂದೆ ನಡೆಯಲು ಹಿಂಜರಿದು, ನಿಂತುಕೊಂಡನು.

"ಬಾ ಶಿವನ್, ಅಲ್ಲೇಕೆ ನಿಂತುಕೊಂಡೆ? ಇದು ಇಲ್ಲಿಯ ನಿತ್ಯ ಕತೆ.... " ಅಂದನು ಗೋವಿಂದರಾಜು.

ಅಷ್ಟರಲ್ಲಿ ಒಬ್ಬಳು ದಪ್ಪವಾದ ಹೆಂಗಸು ಗೋವಿಂದರಾಜುವಿನೆಡೆಗೆ ಧಾವಿಸಿ ಬಂದುದು ಶಿವನಿಗೆ ಕಾಣಿಸಿತು. ಅವಳು ರಾಜುವಿನ ಮುಖವನ್ನು ತಿವಿಯುವಂತೆ ಮಾತನಾಡಿದುದು ಶಿವನಿಗೆ ಕಂಡು ಸೋಜಿಗವಾಯಿತು.

"ಕೇಳಿಸಿತಲ್ಲ ನಿಮಗೆ!" ಹೆಂಗುಸು ರಾಜುವಿನ ಬಳಿ ನಿಂತು ಆರ್ಭಟಿಸಿದಳು "ಆ ಹೆಂಗಸು ನನಗೆ ಏನೆಂದು ಬೈದಳು! ಕೇಳಿದಿರೋ ಇಲ್ಲವೋ ನೀವು?.... ಹೆಂಡತಿಗಾದ ಅವಮಾನ ಕಂಡು ಹೀಗೆ ಬೆಪ್ಪನಂತೆ ಕುಳಿತಿದ್ದೀರಲ್ಲಾ? ಮೂಗಿನ ಕೆಳಗೆ ನೀವು ಮೀಸೆ ಹೊತ್ತದ್ದು ಯಾಕಂತ ನಾ ಕೇಳ್ತೇನೆ!.... "

"ಶ್ಯೂ.... ಶ್ಯೂ.... " ರಾಜು ಹೆಂಡತಿ ನಿಃಶಬ್ದಳಾಗಲು ಪಿಸುಗುಟ್ಟಿದನು.

"ಶ್ಯೂ ಶ್ಯೂ ಎಂದು ಏಕೆ ಜೀವ ತಿಗೆದುಕೊಳ್ತೀರಿ! ಆ ಹೆಣ್ಣು ಹೇಳಿದ ಮಾತುಗಳನ್ನು ಕೇಳಿ ಹೇಗೆ ಜೀವ ಹಿಡಕೊಂಡು ಇರುವುದು ಅಂತ ಕಷ್ಟಪಡ್ತಿದ್ದೇನೆ! ನೋಡಿ, ನಲ್ಲಿಯಡಿಯಲ್ಲಿ ಮೊದಲು ನಾನು ಕೊಡವನ್ನಿಟ್ಟಿದ್ದೆ. ಅದನ್ನು ಬದಿಗಿಟ್ಟು ಅವಳು ತನ್ನ ಕೊಡವನ್ನಿಡುವುದೆಂದರೆ ಏನನ್ಯಾಯ ನೋಡ್ರಿ! ಅದರ ಮೇಲೆ ಬಾಯಿಗೆ ಬಂದಂತೆ ನನ್ನನ್ನು ಬಯ್ಯುವುದೆಂದರೇನು?.... "

" ಆ ಹಾಹಾ ! ನಲ್ಲಿಯಡಿಯಲ್ಲಿ ನೀ ಮೊದಲು ಕೊಡಪಾನ ಇಟ್ಟೆಯಾ ? ನಾನಿಟ್ಟ ಕೊಡವನ್ನು ನೀಯಲ್ಲವೇ ಬದಿಗಿಟ್ಟದ್ದು ? ಅಲ್ಲಿಂದ ಮತ್ತೆ ಗಂಡನ ಬಳಿ ದೂರು ಹೇಳ್ತಾಳೆ ! ಏನು ಇವಳಿಗೆ ಮಾತ್ರ ಗಂಡ ನಿರುವುದು ಕಾಣುತ್ತೆ ! ನೋಡೋಣ, ಅವರು ಕೆಲಸ ಮುಗಿಸಿ ಬರಲಿ, ನಾ ಹೇಳದೆ ಬಿಡುವುದಿಲ್ಲಾ.... "

" ಅರೆರೆ ! ಈ ಹುಚ್ಚು........ "

" ಶ್ಯೂ.... ಶ್ಯೂ.... ನೋಡೇ ಅಲ್ಲಿ ಯಾರೂಂತ.... " ಬಾಗಿಲ ಬಳಿ ನಿಂತುಕೊಂಡಿದ್ದ ಶಿವನನ್ನು ಗೋವಿಂದರಾಜು ತೋರಿಸಿದನು ಎಲ್ಲರ ದೃಷ್ಟಿಯೂ ಶಿವನೆಡೆಗೆ ಹೊರಳಿತು. ಆ ಹೊಸಬನನ್ನು ಕಂಡು ಜಗಳವು ಕ್ಷಣದಲ್ಲಿ ನಿಂತುಹೋಯಿತು ಗೋವಿಂದರಾಜುವಿನ ಹೆಂಡತಿ ಅನಿರೀಕ್ಷಿತವಾಗಿಯೇ ಶಾಂತಳಾದಳು. ಶಿವನೆಡೆಗೆ ಮುಖ ತಿರುಗಿಸುತ್ತಾ ರಾಜು ಕರೆದ.

" ಅಲ್ಲೇಕೆ ನಿಂತಿದ್ದೀ, ಶಿವನ್ ? ಬಾ.... ಇತ್ತ ಬಾ.... "

ಶಿವನ್ ಗೋವಿಂದರಾಜು ತೋರಿಸಿದ ಚಾಪೆಯ ಮೇಲೆ ಕುಳಿತು ಕೊಂಡನು ಅಷ್ಟರಲ್ಲೇ ರಾಜುವಿನ ಹೆಂಡತಿ ಒಳಕೋಣೆಗೆ ನಡೆದಿದ್ದಳು. ಅಲ್ಲಿಂದ " ಶ್ಯೂ....ಇತ್ತ ಬನ್ನಿರಿ ಒಮ್ಮೆ " ಎಂದು ಗಂಡನನ್ನು ಕರೆದಳು. ಗೋವಿಂದರಾಜು ಒಳನಡೆದನು

" ಯಾರವನು ? " ಒಳಗಿನಿಂದ ಪಿಸುಗುಟ್ಟಿದುದು ಶಿವನಿಗೆ ಕೇಳಿಸಿತು.

" ನಮ್ಮ ಬ್ಯಾಂಕಿನಲ್ಲಿ ಹೊಸದಾಗಿ ಬಂದ ಪೇದೆ. ಒಳ್ಳೇ ಗುಣ ವಂತ ಹೀಗೇ ಮನೆ ತೋರಿಸಲೆಂದು ಕರಕೊಂಡು ಬಂದೆ.... "

" ಹೂಂ ಒಳ್ಳೇದು. ಒಳ್ಳೇದು.... " ರಾಜುವಿನ ಹೆಂಡತಿ ಸಿಡಿ ಮಿಡಿಗೊಂಡು ಹೇಳಿದುದು ಶಿವನಿಗೆ ಕೇಳಿಸಿತು " ಸಿಕ್ಕಿದವರನ್ನೆಲ್ಲ ಇಲ್ಲಿಗೆ ಕರೆದುಕೊಂಡು ಬನ್ನಿರಿ.... ಇದೇನು ಛತ್ರವೆಂದು ತಿಳಿದಿದ್ದೀರಾ ?.... "

" ಶ್ಯೂ.... ಶ್ಯೂ.... ಹಾಗೆಲ್ಲಾ ಮಾತಾಡಬೇಡ... .... ಅವನಿಗೆ ಕೇಳಿಸೀತು.

" ಕೇಳಿಸಿದರೆ ಒಳ್ಳೇದೇ ಆಯಿತು ... ಮತ್ತೆ ಯಾಕೆ ಸಿಕ್ಕಸಿಕ್ಕವರ ನ್ನೆಲ್ಲ ಕರಕೊಂಡು ಬರುತ್ತೀರಿ.... "

"ದಯವಿಟ್ಟು ಆ ವಿಚಾರ ಮತ್ತೆ ಮಾತನಾಡು" ಶಿವನಿಗೆ ಗೋವಿಂದರಾಜುವಿನ ದೈನ್ಯ ಧ್ವನಿ ಕೇಳಿಸಿತು "....ಈಗೊಮ್ಮೆ ಸ್ವಲ್ಪ ಕಾಫಿ ಮಾಡುತ್ತೀಯಾ" "ಕಾಫಿ? ಮತ್ತೇನು ಬೇಡ? ಬಂದು ಹೋಗುವವರಿಗೆಲ್ಲ ಕಾಫಿ ಮಾಡಲು ನನ್ನಿಂದ ಸಾಧ್ಯವಿಲ್ಲ. ಕಾಫಿ ಹುಡಿ ತಂದುದೂ ಇಲ್ಲ...." ರಾಜುವಿನ ಹೆಂಡತಿಯ ಸಿಡುಕಿನ ಧ್ವನಿ ಶಿವನಿಗೆ ಕೇಳಿಸಿತು.

ಶಿವನು ಕೂಗಿ ಹೇಳಿದನು. "ರಾಜು! ನನಗೆ ಕಾಫಿ ಬೇಡ ಮಹಾರಾಯ! ಬಾ ಹೊರಗೆ. ನನಗೆ ಹೊತ್ತಾಗುತ್ತದೆ. ನನ್ನೊಟ್ಟಿಗೆ ಓ ಅಲ್ಲಿಯ ತನಕ ಬಾ...."

ರಾಜು ಬಿಳುಪಾದ ಮುಖವನ್ನು ಹೊತ್ತುಕೊಂಡು ಹೊರಗೆ ಬಂದನು. ಇಬ್ಬರೂ ಮನೆಯ ಹೊರಗೆ ಬಂದರು.

"ನನ್ನ ಮನೆಯ ಗತಿ ನೋಡಿದೆಯಾ, ಶಿವನ್?" ರಾಜು ಕೇಳಿದನು. ಅವನ ಸ್ವರದಲ್ಲಿ ಹಿಡಿಸಲಾರದ ವೇದನೆ ತುಂಬಿತ್ತು. ಒಂದು ಕ್ಷಣ ಕಳೆದು ರಾಜು ಶಿವನೆಡೆಗೆ ಮುಖ ತಿರುಗಿಸಿ ಉಸುರಿದ "....ಇದನ್ನು ನಿನಗೆ ತೋರಿಸಲೆಂದೇ ನಾ ನಿನ್ನನ್ನು ಕರೆದು ತಂದೆ ಶಿವನ್!"

ಇಬ್ಬರೂ ಮೌನವಾಗಿ ಮಾರ್ಗದಲ್ಲಿ ಮುನ್ನಡೆದರು. ಶಿವನ ಹೃದಯ ಅನುಕಂಪದಿಂದ ಭಾರವಾಗಿತ್ತು. ಅದ್ದರಿಂದಲೇ ಮಾತೇನೂ ಹೊರಬರಲಿಲ್ಲ. ಮೌನವನ್ನು ಮುರಿಯುತ್ತಾ ರಾಜು ಥಟ್ಟನೆ ನಿಂತು ಅಂದ. "ಶಿವನ್! ಎಷ್ಟು ದೂರ ನಾ ಬರಲಿ. ಇನ್ನು ಹಿಂತೆರಳುತ್ತೇನೆ. ಆಗದೇ?"

ತಲೆನೆಗ್ಗಿ ಶಿವನ್ "ಹೂಂ" ಅಂದನು.

ಇತ್ತ ಶೀಲೆ ತನ್ನ ಕೋಣೆಯಲ್ಲಿ ಕುಳಿತು ಕತೆ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಕುಳಿತಿದ್ದಳು. ಕೆಲವು ವಾಕ್ಯಗಳಷ್ಟು ಓದುತ್ತ, ಕೈಗಡಿಯಾರವನ್ನು ನೋಡಿಕೊಳ್ಳುತ್ತಿದ್ದಳು. ಶಿವನ್ ಯಾವಾಗಲೋ ಬರಬೇಕಿತ್ತು. ಆದರೆ ಇನ್ನೂ ಬಂದಿಲ್ಲ. ಇನ್ನೇನು ಮಾಡಲಿ? ತಾನೊಬ್ಬಳೇ ಹೋಗಲೇ? ಎಂದು ಚಿಂತಿಸುತ್ತಿದ್ದಳು.

"ಶೀಲಾ! ಸಮಯವಾಗುತ್ತ ಬಂತಲ್ಲಾ? ಶಿವನ್ ಇನ್ನೂ ಬಂದಿಲ್ಲ? ಹಾಗಾದರೆ ನೀನೊಬ್ಬಳೇ ಹೋಗಿಬಿಡು. ಕೆಟ್ಟ ಹುಡುಗ!

ಬ್ಯಾಂಕಿನಲ್ಲಿ ಕೆಲಸ ಸಿಕ್ಕಿತೆಂದು ಪಿತ್ತ ತಲೆಗೇರಿದೆ. ಎಲ್ಲೆಲ್ಲಿಯೋ ತಿರುಗುತ್ತಾನೆ!" ಶೀಲೆಯ ತಾಯಿ ಹೇಳಿದಳು

"ಆಯಿತಮ್ಮಾ" ಎಂದು ಶೀಲೆ ಎದ್ದಳು. ಆದರೆ ತಾಯಿಯ ಕಡೆಯ ಮಾತುಗಳು ಅವಳಿಗೇಕೋ ಹಿಡಿಯಲಿಲ್ಲ. ಏಕೋ ಆ ನುಡಿಗಳು ಶೀಲೆಯ ಹೃದಯದಲ್ಲಿ ನೋವನ್ನೆಬ್ಬಿಸಿದುವು.

ರೇಲ್ವೆ ಸ್ಟೇಷನ್ನಿಗೆ ಹೋಗಲಿಕ್ಕಿದೆ ಎಂದು ಮೊದಲೇ ತಿಳುಹಿಸುತ್ತಿದ್ದರೆ ಶಿವನ್ ಸಮಯಕ್ಕೆ ಬರುತ್ತಿದ್ದನು. ಆದರೆ ಅವನಿಗೆ ಈ ವಿಷಯವೇನು ಗೊತ್ತು? ಬ್ಯಾಂಕಿನಲ್ಲಿ ಹೆಚ್ಚಿನ ಕೆಲಸವಿದ್ದಿರಬಹುದು. ಇಲ್ಲವಾದರೆ ಶಿವನ್ ಬಂದೇ ಬಿಡುತ್ತಿದ್ದನು. 'ನಾನು ಇಂದು ಸಂಜೆ ಮದರಾಸು ಸೇರುವೆನು' ಎಂದು ಮಾವನ ತಂತಿ ಅಂದು ಮಧ್ಯಾಹ್ನ ತಲುಪಿತ್ತಷ್ಟೆ. ಅವರ ಸಾಮಾನನ್ನು ಹೊತ್ತು ಕಾರಲ್ಲಿ ತುಂಬಿಸಲು ಶಿವನ ಅಗತ್ಯವಿತ್ತು. ಆದರೆ .......

'ಡ್ರ್ಯೈವರನ ಹತ್ತಿರವೇ ಸಾಮಾನು ಹೊರಿಸಬಹುದು ಅದಲ್ಲವಾದರೆ ಪೋರ್ಟರಗಳಿಗೇನು ಕೊರತೆ' ಎನ್ನುತ್ತಾ ಶೀಲೆ ಎದ್ದು ನಿಂತಳು ಮನೆಯ ಹೊರಗೆ ಬಂದು ಕಾರು ಹತ್ತಿದಳು. ಕಾರು ಸೆಂಟ್ರಲ್ ಸ್ಟೇಷನಿನತ್ತ ಹೊರಟಿತು

ಐದು ಮೈಲುಗಳಷ್ಟು ನಡೆದು ಶಿವನ್ ಸಾಂಥೋಮನ್ನು ಸೇರಿದ. ಮನೆಯ ಗೇಟನ್ನು ತಲಪುವಾಗ, ಕಾರು ಭರ್‍ರನೆ ಹೊರಬಂದು ನಿಂತುಕೊಂಡುದು ಶಿವನಿಗೆ ಕಾಣಿಸಿತು. ಅವನು ಕಾರಿನ ಬಳಿಗೆ ನಡೆದನು. "ಶಿವನ್! ಎಷ್ಟು ತಡ ಇನತ್ತು, ನಿನಗೆ ಬರಲಿಕ್ಕೆ! ನಿನ್ನನ್ನು ಕಾದು ಕಾದು ಸಾಕಾಯಿತು. ಬಾ ಒಳಗೆ ಕುಳಿತುಕೋ ಸ್ಟೇಷನಿಗೆ ಹೋಗಬೇಕಾಗಿದೆ!" "ಸ್ಟೇಷನಿಗೆ?!" ಡ್ರ್ಯೈವರನ ಪಕ್ಕದಲ್ಲಿ ಕುಳಿತುಕೊಳ್ಳುತ್ತಾ ಶಿವನ್ ಕೇಳಿದ.

"ಪೋಲೀಸ್ ಸ್ಟೇಷನಿಗಲ್ಲ; ರೇಲ್ವೆ ಸ್ಟೇಷನಿಗೆ!" ಡ್ರ್ಯೈವರ್ ತನ್ನ ದನಿಗೂಡಿಸಿ ನಗಾಡಿದನು. ಶೀಲೆಯೂ ನಕ್ಕಳು. ತುಸು ಬೆಪ್ಪನಂತಾಗಿಯೇ ಶಿವನ್ ಕೇಳಿದ ಮತ್ತೆ.

"ಸ್ಟೇಷನಿಗೆ ಯಾಕೆ, ಈಗ?"

"ನನ್ನ ಮಾವ ಮುಂಬಯಿಯಿಂದ ಬರುತ್ತಾರೆ!' ಶೀಲೆ ಯೆಂದಳು

"ನನಗೆ ಗೊತ್ತೇ ಇರಲಿಲ್ಲವಲ್ಲ!"

"ತಂತಿ ಇಂದು ಮಧ್ಯಾಹ್ನ ಬಂತಪ್ಪ. ಸ್ಟೇಷನಿಗೆ ಒಟ್ಟಿಗೆ ನಿನ್ನನ್ನು ಕರಕೊಂಡು ಹೋಗು ಎಂದು ತಾಯಿ ಹೇಳಿದರು. ನಿನಗಾಗಿ ಕಾದೇ ಕಾದೆ ಆದರೆ ನೀನು ಬರಲೇ ಇಲ್ಲ!"

"ಬ್ಯಾಂಕಿನ ಪೇದೆ ರಾಜು ಮನೆಗೆ ಬರಲಿಕ್ಕೆ ಹೇಳಿದ. ಅವನ ಒತ್ತಾಯ ಸಹಿಸಲಾರದೆ ಹೋದೆ.... ತಡವಾಯಿತು" ಶಿವನಂದನು. ಡ್ರೈವರ್ ಕಿಸಕ್ಕನೆ ನಕ್ಕ. ಶೀಲೆ ಕೇಳಿದಳು.

"ಏಕೆ ಡ್ರೈವರ್ ನಗಾಡಿದಿ?"

"ಏನು ಹೇಳುವುದಮ್ಮ? ಆ ರಾಜು ಒಬ್ಬ ಬರೀ ಪೆದ್ದ. ಹೆಂಡತಿಗೆ ಹೆದರಿ ಸಾಯುತಿದ್ದಾನೆ ಅವನ ಹೆಂಡತಿ ಅಂದರೆ ಮುಖಾ ಗಂಡು ಭೀರಿ. ರಾಜು ಪಾಪ ಇಲಿಮರಿಯಾಗಿದ್ದಾನೆ ಅವಳೆದುರಿನಲ್ಲಿ! ಅಲ್ಲವೇ ಶಿವನ್?" ಡ್ರೈವರ್ ಹೇಳಿದನು.

"ಹೌದು" ಶಿವನಂದ. ಹಾಗೂ ಶೀಲೆಗೆ ರಾಜುವಿನ ಹೆಂಡತಿಯ ಅಂದಿನ ಅಟ್ಟಹಾಸವನ್ನು ಹೇಳಿದನು. ಮೂವರೂ ಕನಿಕರದಿಂದ ನಕ್ಕರು. ಅಷ್ಟರಲ್ಲಿ ಸ್ಟೇಷನಿನ ಸಮೀಪಕ್ಕೆ ಅವರು ತಲುಪಿದರು.

ಶೀಲೆ ಎರಡು ಪ್ಲಾಟ್‌ಫಾರ್ಮ್ ಟಿಕೇಟುಗಳನ್ನು ಪಡಕೊಂಡಳು. ಶೀಲೆ ಮತ್ತು ಶಿವನ್ ಮುಂಬಯಿಯ ಬಂಡಿ ಬಂದು ನಿಲ್ಲುವ ಪ್ಲಾಟ್‌ಫಾರ್ಮದತ್ತ ಹೊರಳಿದರು. ನೂರಾರು ಜನ ಪೋರ್ಟರರು ಬಂಡಿಗಾಗಿ ಅದಾಗಲೇ ಕಾದುಕೊಂಡಿದ್ದರು. ಶೀಲೆ ಮತ್ತು ಶಿವನ್ ಪ್ಲಾಟ್‌ಫಾರ್ಮಿನ ಉದ್ದಕ್ಕೆ ಮೇಲೆ ಕೆಳಗೆ ನಡೆಯತೊಡಗಿದರು. ಶೀಲೆ ಅನಿರೀಕ್ಷಿತವಾಗಿ ಕೇಳಿದಳು.

"ಶಿವನ್! ವಿದ್ಯಾವಂತನಾದ ನಿನಗೆ ಈ ಆಫೀಸ್‌ಬಾಯ್‌ಯ ಕೆಲಸ ದುಃಖದಾಯಕವಲ್ಲವೇ?"

ಶಿವನ್, ಶೀಲೆಯ ಮುಖವನ್ನು ನೋಡುತ್ತಾ, ಹೇಳಿದನು.

"ಎಳ್ಳಷ್ಟೂ ದುಃಖವಾಗುವುದಿಲ್ಲ, ಶೀಲಾ! ಮೊದಲು ಒಂದು ದಿನ ನಿಜಕ್ಕೂ ಬೇಸರವಾಯಿತು. ನನಗೇಕೆ ದುಃಖವಾಗಬೇಕು ಎಂದು

ನನ್ನನ್ನು ನಾನೇ ಕೇಳಿಕೊಂಡೆ. ಕಲಿತಿದ್ದೇನೆ ಎಂಬ ಕೆಟ್ಟ ಹೆಮ್ಮೆಯಿಂದ ಲ್ಲವೇ ದುಃಖ ? ಎಷ್ಟೆಂದರೂ ನಾ ಯಾರು ? ಕೀಳು ತರಗತಿಯವನು; ಅಲ್ಲವೇ ಶೀಲಾ ?........ ''

ಕಳವಳದಿಂದ ಶೀಲೆ ಶಿವನ ಮುಖವನ್ನು ನೋಡಿದಳು. ಗಂಭೀರ ನಾಗಿ ಶಿವನ್ ಮುಂದುವರಿಸಿದನು. " ನಿಮ್ಮಲ್ಲಿಗೆ ಬಾರದಿರುತಿದ್ದರೆ ನನ್ನ ಗತಿ ಏನಾಗುತ್ತಿತ್ತೋ ? ಬಹುಶಃ ಮುನಿಸ್ವಾಮಿಯೊಡನೆ ದೊಡ್ಡ ಕಳ್ಳನಾಗಿ ಜೈಲು ಸೇರುತಿದ್ದೆನೋ ಏನೋ ! ಅಥವಾ ಎಲ್ಲಿಯೋ ಏನೋ, ರಿಕ್ಷಾ ಎಳೆದುಕೊಂಡೋ, ಕೈಬಂಡಿ ಎಳೆದುಕೊಂಡೋ ಹೇಗೋ ಜೀವನ ನಡೆಸುತ್ತಿದ್ದೆನು ! ಅಂಥವನಿಗೆ ಈ ಕೆಲಸ ಸಾಲದೇ, ಶೀಲಮ್ಮ ? ಈಗ ನಿಜವಾಗಿ ಹೇಳುತ್ತೇನೆ, ಈ ಕೆಲಸ ನನಗೆ ತುಂಬ ತೃಪ್ತಿ ಕೊಟ್ಟಿದೆ. ಕ್ಲಾರ್ಕ್ ಆಗಬೇಕೆಂಬ ಹುಚ್ಚು ಆಶೆ ಕಟ್ಟಿಕೊಂಡುದನ್ನು ಈಗ ನೆನೆಯುವಾಗ ನನಗೆ ನಗು ಬರುತ್ತದೆ ? ನನ್ನ ಹುಚ್ಚುತನವನ್ನು ನೋಡಿ !.... "

ಸುತ್ತು ಮುತ್ತಲಿದ್ದ ಜನವೆಲ್ಲ ಗಲಿಬಿಲಿ ಮಾಡತೊಡಗಿದರು. ದೂರ ದಲ್ಲಿ ಬಂಡಿಯ ಮುಖ ಕಾಣಿಸಿತು. ಶೀಲೆ ಆ ಕಡೆಗೆ ಮುಖ ತಿರುಗಿ ಸಿದಳು. ಶಿವನ್ ಮಾತು ನಿಲ್ಲಿಸಿದನು.

ಒಂದನೆಯ ತರಗತಿಯಿಂದ ಉತ್ತಮ ಉಡುಪುಗಳನ್ನು ಧರಿಸಿದವ ರೊಬ್ಬರು ಇಳಿದರು. ಶೀಲೆ " ಮಾವಾ ! " ಎಂದು ಉದ್ಗರಿಸಿ ಮುಂದೆ ಸರಿದಳು. " ಯಾರದು ? ಶೀಲೆಯೋ ? " ಎಂಬ ಅವರ ಉಲ್ಲಾಸದ ನುಡಿಗಳು ಶಿವನ ಕಿವಿಗಳಿಗೆ ಬಡಿದುಕೊಂಡವು.

— — — —

## ೧೪

**ಆರಾಮಾಸನದಲ್ಲಿ ಕುಳಿತ ಚೆಟ್ಟಿಯಾರರು ಕೂಗಿದರು.**

**" ಶೀಲೆ ! ಇಲ್ಲಿ ಬಾ.... "**

ಕೋಣೆಯ ಬಾಗಿಲನ್ನು ಅರ್ಧ ದಾಟುತಿದ್ದ ಶೀಲೆ ತಡೆದು ನಿಂತು ಕೇಳಿದಳು.

" ಏನಪ್ಪಾ ? "

" ಇಲ್ಲಿ ಬಾ. ಒಳಗೆ ಬಂದು ಕುಳಿತುಕೋ. ನನ್ನ ಬಳಿ ಈಗೀಗ ಮಾತನಾಡುವುದೇ ಇಲ್ಲವಲ್ಲ ನೀನು ! " ಚೆಟ್ಟಿಯಾರರು ನಗಾಡುತ್ತಾ ಅಂದರು.

ತಂದೆಯ ಸಮೀಪ ಬಂದು ಕುಳಿತುಕೊಳ್ಳುತ್ತ ಶೀಲೆ ನುಡಿದಳು.

" ನೀವು ಯಾವಾಗಲೂ ಲೆಕ್ಕ ಪತ್ರಗಳಲ್ಲೇ ಬಿದ್ದಿರುತ್ತೀರಿ. ಮತ್ತೆ ನಾ ಬಂದು ಹರಟೆ ಮಾಡಿದರೆ ನಿಮಗೆ ತೊಂದರೆಯಾಗಲಿಕ್ಕಿಲ್ಲ ವೇನಪ್ಪಾ ? "

ಚೆನ್ನಾಗಿ ನಗುತ್ತಾ ಚೆಟ್ಟಿಯಾರರಂದರು. " ನೀನೇನಾದರೂ ಹರಟೆ ಕೊಚ್ಚಿದರೆ ನನಗೆ ತೊಂದರೆಯೆನಿಸೀತೇ ಶೀಲಾ? ಏನು ಕೇಳುತ್ತೀ ನೀನು ! "

ಶೀಲೆ ನಕ್ಕಳಷ್ಟೆ.

" ಶೀಲಾ ! ನಿನ್ನ ಪರೀಕ್ಷಾ ಫಲಿತಾಂಶ ಯಾವಾಗ ಬಂದೀತು ? " ಕಟ್ಟನೆ ಕೇಳಿದರವರು.

" ಇನ್ನೆರಡು ಮೂರು ವಾರಗಳೊಳಗೆ ಬಂದೀತಪ್ಪಾ ! " ಶೀಲೆ ಯಂದಳು.

" ನೋಡು. ನಿನ್ನ ಮಾವ ನಾಡದು ಮುಂಬಯಿಗೆ ಹೋಗು ತ್ತಾನೆ " ಚೆಟ್ಟಿಯಾರರು ಕೇಳಿದರು " ನೀನೂ ಅವರೊಡನೆ ಮುಂಬಯಿಗೆ ಹೋಗುವಿಯಾ ? "

" ನನಗೆ ಕಾಲೇಜಿಗೆ ಹೋಗಬೇಡವೇನಪ್ಪಾ ? " ಶೀಲೆ ಗಾಬರಿ ಯಿಂದ ಕೇಳಿದಳು.

" ಆ ವಿಷಯ ಮತ್ತೆ ಆಲೋಚನೆ ಮಾಡಬಹುದಲ್ಲ, ಶೀಲಾ ! ಇನ್ನೂ ಫಲಿತಾಂಶ ಬಂದಿಲ್ಲ. ಕಾಲೇಜು ಆರಂಭವಾಗಲು ಇನ್ನೂ ಒಂದು ತಿಂಗಳಿದೆ. ಈಗೇನು ಅವಸರ ? ನಿನಗೆ ಮುಂಬಯಿ ನೋಡ ಬೇಕೆಂದೆನಿಸುವುದಿಲ್ಲವೇ, ಶೀಲೆ ? "

" ಅನಿಸುತ್ತದೆ........ "

" ಹಾಗಾದರೆ ಮಾವನೊಡನೆ ಹೊರಟುಬಿಡು. ಅಲ್ಲಿ ಒಂದು ತಿಂಗಳು ಇದ್ದು ಬಾರಲ್ಲ ! "

ಅಷ್ಟರಲ್ಲಿ ಬಾಗಿಲಿನಿಂದ ಸ್ವರ ಕೇಳಿಸಿತು.

" ಏನು ತಂದೆ ಮಗಳ ಸಂಭಾಷಣೆ ಜೋರಿನಲ್ಲಿ ನಡೆಯುತ್ತಾ ಇದ್ದಹಾಗೆ ಕಾಣುತ್ತದೆ! " ಶೀಲೆ ಮಾವ ಒಳಗೆ ಬಂದು ಸೋಫಾದಲ್ಲಿ ಕುಳಿತುಕೊಳ್ಳುತ್ತಾ ಅಂದರು, " ಶೀಲಾ ! ನಾನು ನಾಡದು ಮುಂಬಯಿಗೆ ಹಿಂತಿರುಗುತ್ತೇನೆ. ನೀನು ಇದುತನಕ ನಮ್ಮಲ್ಲಿಗೆ ಬರಲೇ ಇಲ್ಲ. ಈಗ ನನ್ನೊಡನೇಕೆ ಬರಬಾರದು ? ನಿನಗೆ ಶಾಲೆಯೂ ಇಲ್ಲ.... "

ಶೀಲೆ ಮಾತನಾಡಲಿಲ್ಲ. ಅವಳ ಮಾವ ಹೇಳಿದರು.

" ನಿನ್ನ ಅತ್ತೆ, ನಿನ್ನನ್ನು ಕರಕೊಂಡು ಬರಲಿಕ್ಕೇಬೇಕೆಂದು ಒತ್ತಾಯ ಮಾಡಿದ್ದಾಳೆ. ನೀನು ಹೊರಡಲೇಬೇಕು, ಶೀಲಾ ! "

ಶೀಲೆ ಕಾತುರದಿಂದ ಮಾವನ ಮುಖವನ್ನು ನೋಡಿದಳು. ಶೀಲೆಯ ತಂದೆ ಹೇಳಿದರು

" ನೀವು ಕೋಣೆಯೊಳಗೆ ಬರುವ ಮೊದಲು ನಾವು ಅದೇ ವಿಷಯ ಮಾತನಾಡಿಕೊಂಡಿದ್ದೆವು. ಶೀಲೆ ಆಗಲೇ ನಿಶ್ಚಯ ಮಾಡಿದ್ದಾಳೆ ನಿಮ್ಮೊಡನೆ ಹೊರಡಲು.... "

" ಅಲ್ಲವೆ ಶೀಲಾ ! " ಅವಳ ಮಾವ ಹೇಳಿದರು " ನಿನಗೆ ಪಟ್ಟಣವನ್ನೆಲ್ಲ ತೋರಿಸಲು ನಿನ್ನ ಭಾವ ಮುಂದಿನ ವಾರ ಇಂಗ್ಲೆಂಡಿನಿಂದ ಬರುತ್ತಾನೆ ! "

" ಭಾವ ಬರುತ್ತಾರೆಯೇ ? " ಸಂತಸದಿಂದ ಶೀಲೆ ಕೇಳಿದಳು.

" ಹಾಗಾದರೆ ಒಳ್ಳೇದೇ ಆಯಿತಲ್ಲ ! " ಚೆಟ್ಟಿಯಾರರು ನಗುತ್ತ ಅಂದರು.

" ಶೀಲೆ ! ಆದರೆ ನೀನು ಹಿಂತಿರುಗಿ ಬರುವಾಗ ರಂಗನಾಥನನ್ನು ಇಲ್ಲಿಗೆ ಕರಕೊಂಡು ಬರಬೇಕು ! ಅಂ ? "

ಚೆಟ್ಟಿಯಾರರು ತಮ್ಮ ಭಾವನ ಮುಖವನ್ನು ನೋಡಿದರು. ಅವರೂ ಚೆಟ್ಟಿಯಾರರ ಮುಖವನ್ನು ನೋಡಿದರು. ನಾಲ್ಕು ಕಣ್ಣುಗಳು ಏನೋ

ಗುಪ್ತ ಸಂಭಾಷಣೆ ನಡೆಸಿದಂತೆ ಶೀಲೆಗೆ ಅನಿಸಿತು. ಆದರೆ ಅದೇನೆಂದು ಮಾತ್ರ ಅವಳಿಗೆ ಗೊತ್ತಾಗಲಿಲ್ಲ.

" ಅಂದರೆ ನೀನು ಹೊರಡುತ್ತೀಯಲ್ಲ? " ಮಾವ ಕೇಳಿದರು.

ಏನೋ ಕನಸು ಕಾಣುವವಳಂತೆ ಶೀಲೆ 'ಹೂಂ' ಎಂದು ಅಂದಳು. ಅಲ್ಲಿಂದೆದ್ದು ತನ್ನ ನಿರ್ಧಾರವನ್ನು ತಾಯಿಗೆ ತಿಳುಹಿಸಲು ಹೊರಟಳು. ಆದರೆ ತಾಯಿ ಮನೆಯೊಳಗಿರಲಿಲ್ಲ; ಎಲ್ಲಿಗೋ ಹೊರಗೆ ಹೊರಟು ಹೋಗಿದ್ದರು ಅವಳಿಗೆ ತನ್ನ ಮನದೊಳಗಿನ ಉತ್ಸಾಹವನ್ನು ಯಾರೊಡನೆ ಹಂಚಿಕೊಳ್ಳಲಿ ಎಂದು ತಿಳಿಯದಾಯಿತು. ಅಂತೆಯೇ ತನ್ನ ಕೋಣೆಗೆ ಬಂದಳು. ಕಳ್ಳ ದನಿಯಲ್ಲಿ ಸಿನಿಮಾ ಹಾಡೊಂದನ್ನು ಹಾಡುತ್ತಾ ಹಾಸಿಗೆಯ ಮೇಲೆ ಅಂಗಾತ ಮಲಗಿಕೊಂಡಳು. ಆದರೂ ಅವಳ ಮನಸ್ಸು ಹಾಡಿನಲ್ಲಿ ಲೀನವಾಗಿರಲಿಲ್ಲ. ಅದು ಗರಿ ಕೆದರಿ ಕಲ್ಪನಾ ರಾಜ್ಯದಲ್ಲಿ ವಿಹರಿಸತೊಡಗಿತ್ತು!

ಮುಂಬಯಿ! ಶೀಲೆ ಹೆಸರು ಮಾತ್ರ ಕೇಳಿದ್ದಳಷ್ಟೆ. ಆದರೆ ಆ ಪೊದಲು ನೋಡಿರಲಿಲ್ಲ. ಆ ಆಸೆಯನ್ನು ತಂದೆಯೊಡನೆ ಅವಳು ಹಲವು ಬಾರಿ ತೋಡಿಕೊಂಡುದುಂಟು. ಆದರೆ ಕಾರಣಾಂತರಗಳಿಂದ ಅವಳಿಗೆ ಅಲ್ಲಿಗೆ ಹೋಗಲಾಗಿರಲಿಲ್ಲ. ಆದರೆ ಈಗ ಆ ಸುಸಂದರ್ಭ ತನಗೆ ತಾನೇ ಆಗಿ ಒದಗಿದೆ!

ಮುಂಬಯಿ! ತರಗತಿಯ ಅನೇಕ ಹುಡುಗಿಯರು ಮುಂಬಯಿಗೆ ಹೋದವರಿದ್ದರು. ಅವರೆಲ್ಲ ಬಾಯಿ ತುಂಬ ಆ ಪಟ್ಟಣವನ್ನು ಹೊಗಳುತ್ತಿದ್ದರು. ಮದರಾಸು, ಮುಂಬಯಿಯೆದುರಿಗೆ ಒಂದು ಪಟ್ಟಣವೇ ಅಲ್ಲ ಎಂದವಳ ಗೆಳತಿಯರು ಒಮ್ಮತದಿಂದ ತಮ್ಮ ಖಚಿತಾಭಿಪ್ರಾಯವನ್ನು ತಿಳುಹಿಸಿದ್ದರು. ಅಂದರೆ ಎಷ್ಟು ದೊಡ್ಡ ಪಟ್ಟಣವೋ ಅದು! ಅಲ್ಲಿಯ ಕಟ್ಟಡಗಳು ರಸ್ತೆಗಳು ಮದ್ರಾಸಿಗಿಂತ ದೊಡ್ಡವಂತೆ! ಚಿತ್ರಗಳಲ್ಲೂ ಶೀಲೆ ಅದನ್ನು ಗುರುತಿಸಿಯೇ ಇದ್ದಳು! ಅಲ್ಲಿಯ ಬಸ್ಸುಗಳು. ಅಲ್ಲಿಯ ಟ್ರಾಮುಗಳು, ಅಲ್ಲಿಯ ಜನಸಿಬಿಡ ಜಾಗಗಳು ಎಲ್ಲವೂ ದರ್ಶನೀಯ!

ಅವಳ ಮನಸ್ಸು ರಂಗನಾಥನೆಡೆಗೆ ತಟ್ಟನೆ ಹರಿಯಿತು. ಅವಳ ಮುಖವಾಗ ಗಂಭೀರವಾಯಿತು. ರಂಗನಾಥನ್! ಈಗ ಹೇಗಿದ್ದಾನೋ! ಮೊದಲು ತನ್ನ ಬಾಲ್ಯದಲ್ಲಿ ಅವಳು ಅವನನ್ನು ನೋಡಿದ್ದಳು. ಆಗವಳಿಗೆ

ಅವನು ಗುಣವಂತನಾಗಿ ಕಂಡಿದ್ದನು. ಅವನ ಮುಖವು ಹೇಗಿದೆ–ಎಂದು ಅವಳಿಗೀಗ ಸ್ಪಷ್ಟ ನೆನಪು ಬಾರದು. ಇಂಗ್ಲೆಂಡಿನಿಂದ ಮರಳಿದವರು! ನಡೆನುಡಿಯೆಲ್ಲ ಆಂಗ್ಲ ರೀತಿಯಿರಬಹುದು! ತನ್ನನ್ನು ಕಂಡು ಏನು ಮಾಡುತ್ತಾರೋ? ಅವರ ನಡತೆ ಈಗ ಹೇಗುಂಟೋ? – ಎಂದು ಶೀಲೆ ಚಿಂತಾಮಗ್ನಳಾದಳು.

ರಂಗನಾಥನ ಚಿಂತೆ ಹಿಡಿದಾಕ್ಷಣ ಅವಳಿಗೆ ತಟ್ಟನೆ ಶಿವನ ನೆನಪಾಯಿತು ತಾನು ಮುಂಬಯಿಗೆ ಹೋಗುತ್ತೇನೆ. ಆದರೆ ಶಿವನಿಗೆ ತಿಳಿಸಬೇಡವೇ ಎಂದು ನೆನೆದುಕೊಂಡಳಾಕೆ. ಅಂತೆಯೇ ಕಿಟಕಿಯ ಬಳಿಗೆ ನಡೆದಳವಳು.

" ಶಿವನ್! " ಎಂದು ಕೂಗಿ ಕರೆದಳು.

ಕೋಣೆಯೊಳಗಿನಿಂದ ಹೊರಗೆ ಬಂದು ಶಿವನ್ ಕೇಳಿದನು.

" ಕರೆದೆಯಾ ಶೀಲಿ? "

" ಹೌದು " ಶೀಲೆ ನುಡಿದಳು " ನಾನು ನಾಡದು ಮುಂಬಯಿಗೆ ಹೋಗುತ್ತೇನೆ! "

" ಮುಂಬಯಿಗೆ?! "

" ಹೌದು. ನನ್ನ ಮಾವನೊಡನೆ.... "

" ಯಾವಾಗ ಹಿಂದೆ ಬರುವೆ? "

" ಒಂದು ತಿಂಗಳಿನಲ್ಲಿ! " ತುಸು ತಡೆದು ಕುಗ್ಗಿದ ಶಿವನ ಮುಖವನ್ನು ನೋಡುತ್ತಾ ಶೀಲೆಯೆಂದಳು "....ಒಂದು ತಿಂಗಳೊಳಗೆ ಬರುತ್ತೇನೆ ಶಿವನ್. ಅನಂತರ ನನಗೆ ಕಾಲೇಜಿಗೂ ಹೋಗಲಿಕ್ಕಿದೆಯಲ್ಲಾ? "

ಶಿವನು ಮುಖದ ಮೇಲೆ ಪ್ರಯತ್ನದ ನಗುವನ್ನು ತರುತ್ತಾ ಅಂದನು.

" ಮುಂಬಯಿಯಿಂದ ಬಂದ ಅನಂತರ ನೀನು ಕಂಡುದನ್ನೆಲ್ಲ ವಿವರಿಸಿ ಹೇಳಬೇಕು, ಶೀಲಮ್ಮ! "

" ಹೇಳದಿರುತ್ತೇನೆಯೇ? " ಶೀಲೆ ನಗಾಡಿದಳು.

———

೧೫

ಶೀಲಿ ಹೊರಟು ಹೋದಳು. 'ಮನೆಯ ಜೀವವೇ ಹೊರಟು ಹೋದಂತಾಯಿತು' – ಎಂದು ಸುಂದ್ರಮ್ಮ ಹೇಳಿದ ಮಾತು ಅಕ್ಷರಶಃ ನಿಜವೆಂದು ಶಿವನಿಗೆ ಅನಿಸಿತು. ಈಗ, ಬ್ಯಾಂಕಿನ ಕೆಲಸ ಮುಗಿಸಿ ಕೋಣೆಯನ್ನು ಸೇರುವುದರಲ್ಲಿ ಅವನಿಗೆ ಎಲ್ಲಿಲ್ಲದ ಬೇಸರ. ಬ್ಯಾಂಕಿನಲ್ಲಿ ಅವನಿಗೆ ಉತ್ಸಾಹವೇ ಕಡಮೆಯಾಯಿತು. ದಿನಗಳು ಉದ್ದವಾಗಿ ತೋರಿದುವು. ಘಂಟೆಗಳು ಭಾರವಾಗಿ ಕಾಣಿಸಿದುವು. ಬ್ಯಾಂಕಿನ ಕೆಲಸ ಮುಗಿದು ಕೋಣೆಯನ್ನು ಸೇರಿದರೆ ಅವನ ಕಣ್ಣುಗಳು ಕಾರ್ ಷೆಡ್ಡಿನ ಬಳಿಯ ಕಿಟಕಿಯೆಡೆಗೆ ಹರಿಯುವುದು. ದಿನವೂ ರಾತ್ರಿ ಆ ಕೋಣೆಯ ಬೆಳಕು ಆ ಕಿಟಕಿಯ ಮೂಲಕ ಅವನ ಕೋಣೆಯೆದುರಿಗೆ ಚೆಲ್ಲಿಕೊಳ್ಳುತ್ತಿತ್ತು. ಆ ಬೆಳಕೇ ಅವನ ಕೋಣೆಯನ್ನು ನಸುಕಾಗಿ ಬೆಳಗಿಸುತ್ತಿತ್ತು. ಶಿವನ್ ತನ್ನ ಕೋಣೆಯ ದೀಪವನ್ನು ಬೇರೆ ಉರಿಸಿಕೊಳ್ಳುತ್ತಿರಲಿಲ್ಲ. ತನ್ನ ಕೋಣೆಯೊಳಗಿನ ನಸು ಪ್ರಕಾಶದ ಪ್ರಭೆ ತುಸು ಕಡಮೆಯಾಯಿತೆಂದರೆ, ಶೀಲಿ ಕಿಟಕಿಯ ಬಳಿಗೆ ಬಂದು ನಿಂತಳೆಂದು ಶಿವನಿಗೆ ಗೊತ್ತಾಗುವುದು. ಹೊರಗೆ ಬಂದ; ಆ ಸಮಯದಲ್ಲಿ ಶೀಲಿಯನ್ನೊಮ್ಮೆ ನೋಡುವ ಆತುರವನ್ನು ಆತ ಸಹಿಸಲಾರ. ಆದರೆ ಈಗ? ಆತುರವಿಲ್ಲ; ಬೆಳಕಿಲ್ಲ; ಶೀಲಿಯೇ ಇಲ್ಲ! ರಾತ್ರಿಯಲ್ಲಿ ಆ ಕೋಣೆಯ ದೀಪ ಉರಿಯುವುದೇ ಇಲ್ಲ! ಶಿವನಿಗೆ ಎಲ್ಲಿಲ್ಲದ ಬೇಸರ.

ಈ ಬೇಸರದ ಸಮಯವನ್ನು ಅವನು ಆರ್ಮುಗಂ ನೊಡನೆ ಕಳೆಯಲು ಯತ್ನಿಸುತ್ತಾನೆ. ಆರ್ಮುಗಂ ಶಿವನ್ ಖಾಲಿ ಮಾಡಿದ ಕೆಲಸಕ್ಕೆ ಬಂದವನು. ಶಿವನ ಕೋಣೆಯಲ್ಲೇ ಅವನ ವಾಸ. ಆರ್ಮುಗಂ ಹತ್ತು ವರ್ಷದ ಬಾಲಕ. ಅವನೊಡನೆ ಶಿವನ್ ಏನು ಮಾತಾಡಬಹುದು? ಹಾಗೇ ಅವನು ಸುಂದ್ರಮ್ಮನ ಬಳಿ ಹರಟಲು ತೊಡಗುತ್ತಾನೆ. ಆದರೆ ಅವಳೊಡನೆ ಮಾತನಾಡಲೂ ಅವನಿಗೀಗೀಗ ಸಂಕಟವಾಗುತ್ತದೆ. ಏಕೆಂದರೆ ಅವಳ ಮಗ ವಿಶ್ವಂ ಅಗೋಚರನಾಗಿದ್ದಾನೆ. ಧನಿಯ ಮನೆಯಿಂದ ಹಲವು ಆಭರಣಗಳನ್ನು ಕದ್ದು ಎತ್ತಲೋ ಕಣ್ಮರೆಯಾಗಿದ್ದಾನೆ. ಪ್ರತಿ ಮಾತಲ್ಲಿಯೂ ಮಗನ ಸುದ್ದಿ ತೆಗೆಯುತ್ತಿದ್ದ ಸುಂದ್ರಮ್ಮಳಿಗೆ ಬೇಗನೇ ಕಣ್ಣೀರು ಬಂದುಬಿಡುತ್ತದೆ. ಒಣಗಿದ ದೇಹ, ಪರರ ಸೇವೆಯಲ್ಲಿ ಸವೆದ ಕೈಗಳು,

ಅಲ್ಲಲ್ಲಿ ಬಿಳಿಯಾದ ತಲೆಗೂದಲು, ಬಾಡಿದ ಮುಖ-ಬದುಕಿನ ಸಾಯಂ
ಕಾಲದತ್ತ ರಭಸದಿಂದ ಧಾವಿಸುತ್ತಿರುವಂತೆ ತೋರುವ ಸುಂದ್ರಮ್ಮಾಳ ಕಂಠ
ಬಹು ಬೇಗನೇ ಗದ್ಗದವಾಗಿ ಬಿಡುತ್ತದೆ. ಹಳೆಯ ನೆನಹುಗಳನ್ನು,
ಗತಜೀವನದ ಸುಖ ದುಃಖದ ಸ್ಮರಣೆಗಳನ್ನು ಶಿವನೊಡನೆ ಹೇಳುತ್ತಾ,
ಕೊನೆಗೆ ಮಗನ ಮಾತು ತೆಗೆಯುತ್ತಾ ಅವಳು ಅಳತೊಡಗುತ್ತಾಳೆ.
ಅದನ್ನು ನೋಡಿಯೇ, ಶಿವನ್ ಅವಳೊಡನೆ ಹೆಚ್ಚಾಗಿ ಮಾತನಾಡಲು
ಹೋಗುವುದಿಲ್ಲ.

ಬೇಸರ ಕಳೆಯಲು ಅವನಿಗೆ ಕೊನೆಗೊಂದು ಉತ್ತಮ ದಾರಿ ದೊರೆ
ಯಿತು. ಅದು ಶೇಖರನ್ನಾಯರನ ಅಂಗಡಿ. ಅವನ ಕೋಣೆಯಿಂದ,
ತುಸು ದೂರದಲ್ಲೇ ಕೊಂಪೆಯ ಒಂದು ಪಕ್ಕದಲ್ಲಿತ್ತು ಶೇಖರನ್ನಾಯರನ
ಬೀಡಿ, ಸಿಗರೇಟಿನ ಸಣ್ಣಂಗಡಿ.

ಶೇಖರನ್ನಾಯರ್ ಕಲ್ಲಿಕೋಟೆಯವನು. ಬಾಲ್ಯದಲ್ಲಿ ಹೆತ್ತವರ
ಬಳಿ ಹೇಳದೆ, ಕಲ್ಲಿಕೋಟೆಯಲ್ಲಿ ಟಿಕೇಟಿಲ್ಲದೆ ರೈಲು ಬಂಡಿಯೊಂದನ್ನು
ಏರಿದನು. ಬಂಡಿ ಅವನನ್ನು ಮದರಾಸಿಗೆ ತಂದಿಳಿಸಿತು. ಕಿಸೆಯಲ್ಲಿ
ಕಾಸೊಂದೂ ಇರಲಿಲ್ಲ. ಅಂತೆಯೇ ಟಿಕೇಟ್ ಚೆಕ್ಕರನಿಂದ ಎರಡು
ಪೆಟ್ಟು ಮಾತ್ರ ತಿಂದು ಪಟ್ಟಣದ ರಸ್ತೆಯನ್ನು ಸೇರಿದನು. ಕಾಲುಗಳು
ಬಳಲುವ ತನಕ ರಸ್ತೆ ಯುದ್ಧಕ್ಕೆ ನಡೆದನು. ಇನ್ನು ಮುಂದೆ ನಡೆಯ
ಲಸಾಧ್ಯ ಎಂದು ಅವನಿಗೆ ಅನಿಸುವಾಗ, ಎದುರಿಗೆ ದೊಡ್ಡ ಹೋಟೇ
ಲೊಂದು ಕಾಣಿಸಿತು. ಒಳನಡೆದು ಕುರ್ಚಿಯೊಂದರ ಮೇಲೆ ಧೈರ್ಯ
ದಿಂದ ಕುಳಿತುಕೊಂಡನು. ಮಾಣಿ ಬಂದು 'ಏನು ಬೇಕು' ಎಂದು
ತಮಿಳಿನಲ್ಲಿ ಕೇಳಿದಾಗ, ಶೇಖರನ್ನಾಯರ್ 'ಏನೂ ಬೇಡ' ಎಂದು
ಮಲೆಯಾಳದಲ್ಲಿ ಉತ್ತರ ಕೊಟ್ಟ. ಮಸಿ ಹಿಡಿದ ಇವನ ಹರಕು ವೇಷ,
ಕೆದರಿದ ಕ್ರಾಪು, ಬಾಡಿದ ಮುಖ ನೋಡಿ ಮಾಣಿಗೆ ಸಂದೇಹವಾಯಿತು.
ಅವನು ತನ್ನ ಸಂದೇಹವನ್ನು ಮಾಲಕನ ಮುಂದಿಟ್ಟನು!

ಶೇಖರನ್ನಾಯರನಿಗೆ ಕಪ್ಪು-ಪ್ಲೇಟುಗಳನ್ನು ತೊಳೆಯುವ ಕೆಲಸ
ದೊರೆಯಿತು. ಅಲ್ಲಿಂದ ಅವನಿಗೆ ಹೊಟೇಲಿನ ಪಕ್ಕದಲ್ಲಿನ ಬೀಡಿ, ವೀಳ್ಯ
ದೆಲೆ [illegible]ೇಟಿನ ಅಂಗಡಿಗೆ 'ವರ್ಗ'ವಾಯಿತು. ಅನೇಕ ವರ್ಷ
ಅಲ್ಲಿಯೇ ಪಳಗಿ, ಸಂಬಳದ ಹಣವನ್ನು ಮುಂದಾಲೋಚನೆಯಿಂದ

ಕೂಡಿಸಿ, ಕಡೆಗೊಂದು ಶುಭ ದಿನದಲ್ಲಿ ಅವನೇ ಸಾಂಘೋಮಿ ಅಂಗಡಿ ಕಾರನೊಬ್ಬನಾದನು.

ಚೆಟ್ಟಿಯಾರರು ಆಗಾಗ ಸಿಗರೇಟು ತಾ, ವೀಳ್ಯದೆಲೆ ಅಡಕೆ ತಾ ಎಂದು ಶಿವನನ್ನು ಕಳುಹುತಿದ್ದರು. ಶಿವನ್ ಈ ನಾಯರನ ಅಂಗಡಿಗೆ ಬರುತಿದ್ದನು. ಹಾಗೆ ನಾಯರನಿಗೂ ಶಿವನಿಗೂ ಪರಿಚಯವಾಗಿ, ಅದು ಸ್ನೇಹದ ಘಟ್ಟಕ್ಕೇರಿತು. ಶಿವನ್ ತನ್ನ ಚರಿತ್ರೆಯನ್ನೆಲ್ಲ ಅವನೆದುರು ಬಿಚ್ಚಿದನು. ಶೇಖರನ್ನಾಯರ್ ತನ್ನ ಸಾಹಸದ ಜೀವನವನ್ನು ಇವನಿಗೆ ಬಣ್ಣಿಸುವನು.

ಶೀಲೆಯಿಲ್ಲದ ಕಾಲದ ಬೇಸರವನ್ನು ಕಳೆಯಲು ಶಿವನಿಗೆ ಒಳ್ಳೆಯ ತಾಣವು ದೊರೆಯಿತು. ಶಿವನ ಊಟ ರಾತ್ರಿ ಹತ್ತು ಘಂಟೆಗೆ. ಬ್ಯಾಂಕಿನಿಂದ ಸಂಜೆ ಬಂದವನು ಹತ್ತರತನಕ ನಾಯರನ ಅಂಗಡಿಯಲ್ಲೇ ತಳವೂರುವನು. ನಾಯರನಿಗೂ ಅವನ ಇರುವಿಕೆಯಿಂದ ಬೇಸರವಿರಲಿಲ್ಲ. ಗಿರಾಕಿಗಳಿಗೆ ಬೇಕಾದ ಸಾಮಾನುಗಳನ್ನು ಕೊಡಲು ಶಿವನ್ ಸಹಾಯ ಮಾಡುತಿದ್ದನು. ಹೆಸರಿಗೆ ಮಾತ್ರ ನಾಯರ್ ಮಣೆಯ ಮೇಲೆ ಕುಳ್ಳಿರುತಿದ್ದ ಎಲ್ಲ ಕೆಲಸವನ್ನು ಕ್ರಮೇಣ ಶಿವನೇ ಹೊತ್ತುಕೊಳುತಿದ್ದನು. ಸಮೀಪದ ಕೊಂಪೆಯ ಗುಡಿಸಲುಗಳಿಂದ ಮುಸ್ಸಂಜೆಯಲ್ಲಿ ಜನರು ತಂಡ ತಂಡವಾಗಿಯೇ ಅಂಗಡಿಗೆ ಬರುತಿದ್ದರು, ಬೀಡಿಗಾಗಿಯೋ ಅಥವಾ ವೀಳ್ಯಕ್ಕಾಗಿಯೋ. ಇವರಲ್ಲದ ಸಮುದ್ರ ತೀರಕ್ಕೆ ಹೋಗುವ ವಿಹಾರಿಗಳೂ ಗುಂಪು ಕೂಡುತಿದ್ದರು. ಇವರೆಲ್ಲರನ್ನೂ ಶಿವನೇ ತೃಪ್ತಿಪಡಿಸುತಿದ್ದ. ಕೆಲಸದಲ್ಲಿ: — ಅದು ಯಾವದೇ ಇರಲಿ, ಎಂತಹುದೇ ಇರಲಿ ಅವನ ಚುರುಕುತನ ಅಪ್ರತಿಹತ.

ಒಂದು ದಿನ, ಮಣೆಯಲ್ಲಿ ಕುಳಿತು ಬೀಡಿ ಸೇದುತಿದ್ದ ಶೇಖರನ್ನಾಯರ್ ತಟ್ಟನೆ ಹೇಳಿದನು.

"ಹ್ಯಾದೋ ಶಿವನ್! ನೀನೇಕೆ ಒಂದು ಬೀಡಾ ಸಿಗರೇಟು ಅಂಗಡಿ ತೆರೆಯಬಾರದು?"

ನಾಯರನ ಮುಖ ನೋಡಿ ನಗುತ್ತಾ, ಶಿವನಂದ.

"ತಮಾಷೆ ಮಾಡಬೇಡ ಸುಮ್ಮನೆ......."

"ತಮಾಷೆಯಲ್ಲ, ಶಿವನ್! ನಿಜವಾಗಿಯೂ ನಾನು ಹೇಳುತಿದ್ದೇನೆ. ವ್ಯಾಪಾರದಲ್ಲಿ ನಿಜಕ್ಕೂ ನಿನ್ನದು ಎತ್ತಿದ ಕೈ!"

ಶಿವನ್ ಗಿರಾಕಿಯೊಬ್ಬನಿಗೆ ಸಿಗರೇಟು ಕೊಡುತ್ತಾ, ಗಂಭೀರವಾಗಿ ನಾಯರನನ್ನು ನೋಡಿದನು. ನಾಯರ್ ಮುಂದುವರಿಸಿದನು.

"....ಸುಮ್ಮನೇ ಎಷ್ಟು ದಿನ ಪರರ ಕಾಲಡಿಯಲ್ಲಿ ಬೆವರು ಸುರಿಸುತ್ತೀ? ನೋಡು, ಈ ವ್ಯಾಪಾರದ ಉದ್ಯೋಗವೆಂದರೆ ಯಾರ ಹಂಗೂ ಇಲ್ಲ. ನಿನ್ನನ್ನು ಹಾಗೆ ಮಾಡು ಎಂದು ಆಜ್ಞಾಪಿಸುವವರೂ ಇಲ್ಲ. ಅದೇಕೆ ಹಾಗೆ ಮಾಡಿದೆ, ಇದೇಕೆ ಹೀಗೆ ಮಾಡಿದೆ ಎಂದು ಬಯ್ಯುವವರೂ ಇಲ್ಲ. ನಿನ್ನ ಮಟ್ಟಿಗೆ ನಿನಗೆ ರಾಜನಂತೆ ಜೀವಿಸಬಹುದು.... ನಿನಗೀಗ ಬ್ಯಾಂಕಿನಲ್ಲಿ ಸಿಗುವದಾದರೂ ಎಷ್ಟು? ಎಷ್ಟು ಹೇಳು!"

"ಮೂವತ್ತು ರೂಪಾಯಿಗಳು......."

"ಮನಸ್ಸು ಮಾಡಿದ ನೂರು ದಿನಗಳಲ್ಲಿ ನೀನು ನಿನ್ನ ತಿಂಗಳ ಮೂವತ್ತನ್ನು ಅಂಗಡಿಯಲ್ಲಿ ಸಂಪಾದಿಸಬಹುದು. ಅಷ್ಟು ಮಾತ್ರವಲ್ಲ......."

ಶಿವನ್ ನಾಯರನ ಮುಖವನ್ನು ಆಶೆಯಿಂದ ನೋಡಿದನು. ನಾಯರ್ ತನ್ನ ಮಾತಿನ ಪ್ರವಾಹವನ್ನು ತಡೆಗಟ್ಟದೆ ಮುಂದುವರಿಸಿದ.

"....ಅಷ್ಟು ಮಾತ್ರವಲ್ಲ, ಶಿವನ್! ನೋಡು ಇದು ಸ್ವತಂತ್ರವಾದ ವೃತ್ತಿ. ಉದಾಹರಣೆಗೆ ಹೇಳುತಿದ್ದೇನೆ, ನಾಳೆ ನಿನ್ನ ಮೇಲೆ ಚೆಟ್ಟಿಯಾರರಿಗೆ ಅಸಮಾಧಾನವಾಯಿತು ಎಂದಿಟ್ಟುಕೋ. 'ನಡೆ ಹೊರಗೆ' ಎಂದವರು ಹೇಳಿಬಿಟ್ಟರೆ ನೀನು ಚಕಾರ ಉತ್ತರ ಕೊಡದೆ, ಬಾಯಿ ಮುಚ್ಚಿಕೊಂಡು ಬೀದಿ ಸೇರಬೇಕಷ್ಟೆ. ಆದರೆ ಇದರಲ್ಲಿ ಯಾರೂ ನಿನ್ನನ್ನು ಹೊರನಡೆ ಎಂದು ಅನ್ನುವವರಿಲ್ಲ........"

"ಆಯಿತು ಮಹಾರಾಯ! ನಾನು ಅಂಗಡಿ ತೆರೆಯಲು ಇಚ್ಛಿಸುತ್ತೇನೆ ಎಂದೇ ಇಟ್ಟುಕೋ. ಆದರೆ ಅಂಗಡಿ ಎಲ್ಲಿ ಸಿಗುತ್ತದೆ? ಸಾಮಾನುಗಳನ್ನು ತೆಗೆಯಲು ಹಣವೆಲ್ಲಿಂದ?" ಶಿವನ್ ಪ್ರಶ್ನೆ ಹಾಕಿದನು.

"ನಿನ್ನ ಬಳಿ ಒಂದು ನಾನ್ನೂರು ರೂಪಾಯಿ ಆದರೂ ಇಲ್ಲವೆ?"

"ಇದೆ...."

"ಅಷ್ಟು ಹಣ ಧಾರಳ ಸಾಕಲ್ಲ!"

" ಆದರೆ ಅಂಗಡಿ ? "

" ನಿನಗೆ ವ್ಯಾಪಾರ ಮಾಡುವ ಇಚ್ಛೆಯಿದ್ದರೆ ನಾನೆಲ್ಲಿಯಾದರೂ ಅಂಗಡಿ ಹುಡುಕಿಸಿ ಕೊಡುತ್ತೇನೆ. ಒಂದು ವೇಳೆ.... ಈಗಲೇ ನಿಜ ಹೇಳಲಾರೆ.... ಇದೇ ಅಂಗಡಿ ಖಾಲಿಯಾಗಲೂ ಸಾಕು ! "

" ಇದೇ ಅಂಗಡಿ ? ! "

" ಹೌದು. ನನಗೆ ಜಾರ್ಜ ಟವಲಿನಲ್ಲೇ ಒಂದು ತುಸು ದೊಡ್ಡ ಅಂಗಡಿ ಸಿಗುವ ಸಂಭವವಿದೆ. ಅದೂ ಒಂದು ಕಾಫಿ ಹೋಟೆಲಿನ ಪಕ್ಕದಲ್ಲಿ. ಅದು ದೊರೆತರೆ ನಾನಿದನ್ನು ಖಾಲಿ ಮಾಡುವವನೇ.... "

ಶಿವನ್ ಆತುರದಿಂದ ನಾಯರನನ್ನು ನೋಡಿದನು. ನಾಯರ್ ಉತ್ಸುಕತೆಯಿಂದ ಮುಂದುವರಿಸಿದ.

" ನೋಡು. ಆಲೋಚನೆ ಮಾಡು. ರಿಕ್ಷಾವಾಲನಾಗಬೇಕಾಗಿದ ನೀನು ಇಷ್ಟಾದೆ. ಇನ್ನು ಮನಸ್ಸು ಮಾಡಿ, ಹೀಗೇ ಮುಂದುವರಿಸಿದರೆ ಶ್ರೀಮಂತ ವರ್ತಕನಾಗಲೂಬಹುದು. ಪೇದೆಯಾಗಿಯೇ ಉಳಿದರೆ, ಯಾವಾಗಲೂ ಮೂವತ್ತು ರೂಪಾಯಿಯ ಸೇವಕತನದಲ್ಲೇ ಕೊಳೆಯಬೇಕು.... "

" ಆದರೆ ಚೆಟ್ಟಿಯಾರರು ನನಗೆಷ್ಟು ಉಪಕಾರ ಮಾಡಿದ್ದಾರೆ !- ಅವರನ್ನು ಬಿಟ್ಟುಬಿಡುವುದು ನ್ಯಾಯವೇ, ನಾಯರ್ ? " ಕಳವಳದಿಂದ ಶಿವನ್ ಕೇಳಿದನು.

" ಏಕೆ ನ್ಯಾಯವಲ್ಲ ? " ನಾಯರ್ ಸಮರ್ಥಿಸಿದನು " ನೀನಿಷ್ಟು ಕಲಿತವನಾದರೂ ನಿನಗೆ ಕ್ಲಾರ್ಕನ ಕೆಲಸ ಕೊಡಲಿಲ್ಲ. ಬದಲು ಪೇದೆಯ ಕೆಲಸ ಕೊಟ್ಟರು. ಅವರು ನಿನಗುಪಕಾರ ಎಷ್ಟು ಮಾಡಿದರೇನಾಯಿತು ? ನೀನವರ ಮಗಳನ್ನು ಬದುಕಿಸಿರುವೆ. ಅವರ ಮನೆಯಲ್ಲಿ ನಾಯಿಯಂತೆ ದುಡಿದು ಆ ಋಣ ಸಂದಾಯ ಮಾಡಿರುವೆ " !....

ಶಿವನ್ ಆಲೋಚನಾ ಪರವಶನಾದನು.

ರಾತ್ರಿ ಹೊರಟು ಬರುವಾಗ ನಾಯರ್ ಮತ್ತೊಮ್ಮೆ ಶಿವನಿಗೆ ಹೇಳಿದನು.

" ಶಿವನ್ ! ಚೆನ್ನಾಗಿ ಆಲೋಚನೆ ಮಾಡು. ಈ ಸುಸಂದರ್ಭವನ್ನು ಕಳಕೊಳ್ಳಬೇಡ. ಅಷ್ಟೇ ನಾನು ಹೇಳುವುದು.... "

ಮನೆಗೆ ಬಂದು, ಊಟ ತೀರಿಸಿ, ಶಿವನ್ ತನ್ನ ಬೆಂಚನ್ನಾಶ್ರಯಿಸಿದನು. ಒರಗಿದವನಿಗೆ ನಿದ್ರೆ ಮಾತ್ರ ಬರಲಿಲ್ಲ. ಶೇಖರನ್ನಾಯರನ ಮಾತುಗಳು ಅವನ ಮನಸ್ಸಿನಲ್ಲಿ ಸುತ್ತುತಿದ್ದುವು.

“ರಿಕ್ಷಾವಾಲನಾಗಬೇಕಾಗಿದ್ದ ನೀನು ಇಷ್ಟಾದೆ ..... ಶ್ರೀಮಂತ ವರ್ತಕನಾಗಬಹುದು.... ಸೇವಕತನದಲ್ಲೇ ಕೊಳೆಯಬೇಡ....”

ಎಷ್ಟು ನಿಜವಿದೆ ಈ ಮಾತುಗಳಲ್ಲಿ-ಅನಿಸಿತು ಶಿವನಿಗೆ. ಶಿವನಿಗೇ ತಿಳಿದಿದೆಯಲ್ಲ-ನಾಯರನ ಆದಾಯ. ದಿನಕ್ಕೆ ಹತ್ತು ರೂಪಾಯಿಗಳಷ್ಟು ಲಾಭವೇ ಸಿಗುತಿತ್ತು. ತಿಂಗಳಿಗೆ ಎಷ್ಟು ರೂಪಾಯಿ ಆಗಿ ಹೋಯಿತು! ತಾನೇಕೆ ಈ ಸಂದರ್ಭವನ್ನು ಉಪಯೋಗಿಸಿಕೊಳ್ಳಬಾರದು? ನಾಯರ್ ಹೇಳುವಂತೆ ಜೀವನವನ್ನೆಲ್ಲ ಸೇವಕತನದಲ್ಲೇ ಕಳೆಯಬೇಕೆ? ಶ್ರೀಮಂತನಾಗುವ ಯೋಗ ಇದೀಗ ಒದಗಿ ಬಂದಿದೆ. ಅದನ್ನು ಒಗೆದು ಬಿಡುವುದರಲ್ಲಿ ಅರ್ಥವಿದೆಯೇ?....

ಶಿವನ್ ಚಿಂತಾಮಗ್ನನಾದನು.

“ಅವರೇ ನನ್ನನ್ನುದ್ಧರಿಸಿವರು. ಅವರಂದು ನ್ಯಾಯಾಲಯದ ಬಾಗಿಲಲ್ಲಿ ನನ್ನನ್ನು ತಮ್ಮ ಕಾರೊಳಗೆ ಕುಳ್ಳಿರಿಸಿಕೊಳ್ಳದಿದ್ದರೆ ನಾನೊರ್ವ ರಿಕ್ಷಾವಾಲನೋ. ಕೈಬಂಡಿ ಎಳೆಯುವವನೋ ಆಗಬೇಕಾಗಿತ್ತು. ಅವರು, ನಾನು ಶಾಲೆಗೆ ಹೋಗಬೇಕು ಅಂದಾಗ ಒಪ್ಪಿಗೆ ಕೊಡದಿರುತಿದ್ದರೆ, ಇನ್ನೂ ಹೂಗಿಡಗಳಿಗೆ ನೀರೆರೆದುಕೊಂಡು ಇರಬೇಕಾಗಿತ್ತು. ಅವರ ಔದಾರ್ಯದಿಂದಲೇ ನಾನು ವಿದ್ಯಾವಂತನಾದೆ. ಅವರ ಕರುಣೆಯಿಂದಲೇ ತನಗೊಂದು ಕೆಲಸ ದೊರೆಯಿತು.... ತನ್ನ ಮೇಲೆ ಅವರೆಷ್ಟು ಪ್ರೀತಿ ತೋರಿಸಿದ್ದಾರೆ. ಈಗ ಅವರ ಕೈಬಿಟ್ಟು, ನನಗೆ ತೋರಿದ ದಾರಿ ಹಿಡಿಯುವುದು ಸರಿಯೇ? ಯೋಗ್ಯವೇ?.... ?....”

ಶಿವನು ಚಿಂತಾಮಗ್ನನಾದುದನ್ನು ಕಂಡು ನೆಲದ ಮೇಲೆ ಮಲಗಿದ ಆರ್ಮುಗಂ ಕೇಳಿದನು.

“ಏನಣ್ಣಾ, ಭಾರೀ ಯೋಚನೆ?”

“ಅಂ!... ಏನೂ ಇಲ್ಲ! ಏನೂ ಇಲ್ಲ....” ಶಿವನ್ ತಲೆ ತುರಿಸಿಕೊಂಡನು ಅವನಿಗೊಂದೂ ಬಗೆಹರಿಯಲಿಲ್ಲ. ತಾನು ಸಂಪಾದಿಸಿದ ಹಣದಲ್ಲಿ ಅಂಗಡಿ ತೆರೆಯಬಹುದು.... ಆದರೆ ಚೆಟ್ಟಿಯಾರರೊಡನೆ ಹೇಗೆ ಕೇಳಲಿ?....

ಶಿವನಿಗೆ ಥಕ್ಕನೆ ಸುಂದ್ರಮ್ಮನ ನೆನಪಾಯಿತು. ಅವಳನ್ನೇ ಮೊದಲು ವಿಚಾರಿಸುವುದೊಳ್ಳೆಯದು ಎಂದೆನಿಸಿತು ಆವನಿಗೆ. 'ಈಗ ಬರುತ್ತೇನೆ' ಎಂದು ಆರ್ಮುಗನಿಗೆ ಹೇಳಿ, ಶಿವನ್ ಅಡುಗೆ ಕೋಣೆಯತ್ತ ನಡೆದನು.

ಯಾರೋ ಅಡುಗೆ ಕೋಣೆಯೆದುರಿಗೆ ಬಂದಂತಾಗಲು, ಸುಂದ್ರಮ್ಮಳೇ ಕೇಳಿದಳು.

"ಯಾರದು ?"

"ನಾನು !" ಶಿವನುತ್ತರಿಸಿದನು

"ಓಹೋ ! ಶಿವನ್ನೇನು ? ಇದೇನು ಈಗ ಸವಾರಿ ? ಊಟ ಈಗ ತಾನೇ ಮಾಡಿ ಹೋದೆಯಷ್ಟೆ...."

"ಹೌದು. ಆದರೆ...."

"ಆದರೆ ಏನಪ್ಪಾ ?!"

"ನಿನ್ನ ಬಳಿ ಒಂದು ವಿಷಯ ಮಾತನಾಡಲಿಕ್ಕಿತ್ತು...."

"ಅದೇನು ಅಂಥಾ ವಿಷಯ, ಶಿವನ್ ?"

"ಸುಂದ್ರಮ್ಮ!" ಶಿವನ್ ಹೃದಯಸ್ಪರ್ಶಿಯಾಗಿ ಹೇಳಿದ "...ನನಗೆ ಬೇಕಾದವರು ಯಾರೂ ಇಲ್ಲ ನೀನೇ ನನಗೆ ತಂದೆತಾಯಿಯಂತೇ! ಒಂದು ಹೊಸ ವಿಚಾರವೊಂದು ನನ್ನ ತಲೆ ತಿನ್ನಹತ್ತಿದೆ. ಏನು ಮಾಡಲಿ ಎಂದು ನನಗೆ ಗೊತ್ತಾಗುವುದಿಲ್ಲ...."

ಶಿವನ್ ಅಂಗಡಿ ತೆರೆಯುವ ವಿಚಾರವನ್ನು ಹೇಳಿ, ತನ್ನ ಸಮಸ್ಯೆಯನ್ನು ಮುಂದಿಟ್ಟನು.

"ನೀನು ಹೇಳಿದ ಹಾಗೇ ಮಾಡುತ್ತೇನೆ, ಸುಂದ್ರಮ್ಮ. ಚೆಟ್ಟಿಯಾರರ ಬಳಿ ಹೋಗಿ ಅಪ್ಪಣೆ ಕೇಳು ಅಂದರೆ ಕೇಳುತ್ತೇನೆ. ಈ ವಿಷಯವನ್ನು ಇಲ್ಲಿಗೇ ನಿಲ್ಲಿಸಿ ಬಿಡು ಅಂದರೆ ನಿಲ್ಲಿಸಿ ಬಿಡುತ್ತೇನೆ...."

ಸುಂದ್ರಮ್ಮ ತುಸು ಹೊತ್ತು ಮಾತನಾಡಲಿಲ್ಲ. ಶಿವನ್ ಉತ್ಕಂಠಿತನಾಗಿ ಅವಳ ಮುಖವನ್ನೇ ದಿಟ್ಟಿಸಿದನು. ತಗ್ಗಿಸಿದ ತಲೆಯೆತ್ತುತ್ತಾ ಸುಂದ್ರಮ್ಮ ಹೇಳಿದಳು.

"ನಾನು ಹೇಳುತ್ತೇನೆ, ಶಿವನ್ ! ನೀನು ಇಂದೇ ಚೆಟ್ಟಿಯಾರರೊಡನೆ ಕೇಳು. ಅದರಲ್ಲಿ ಸಂಕೋಚಪಡಬೇಕಾದ್ದು ಏನೂ ಇಲ್ಲ,

ಶಿವನ್. ಅವರು ನಿನಗುಪಕಾರ ಮಾಡಿದ್ದಾರೆ, ಅದು ಅವರ ಮಗಳನ್ನು ನೀನು ಕೊಲೆಗಡುಕರ ಕೈಯಿಂದ ಉಳಿಸಿದ್ದಕ್ಕಾಗಿ. ಆದ್ದರಿಂದ ಅದರಲ್ಲಿ ಸಂಕೋಚಪಡಬೇಕಾದ್ದೇನೂ ಇಲ್ಲ. ನೀನು ಅಂಗಡಿ ತೆರೆ. ಇನ್ನೊಬ್ಬರ ಕೈಯಡಿಯಲ್ಲಿ ಎಷ್ಟು ದಿನ ಬಾಳಬೇಕೆಂದಿರುವೆ? ಚೆಟ್ಟಿಯಾರರು 'ಇಲ್ಲ' ಎಂದು ಹೇಳಲಿಕ್ಕಿಲ್ಲ. ನನ್ನ ಮಗ ವಿಶ್ವಂ, ವರ್ಕಷಾಪಿಗೆ ಹೋಗುತ್ತೇನೆ ಅಂದಾಗ ಅವರು ಬೇಡ ಎಂದನಲಿಲ್ಲ...." ಮಗನ ನೆನಪಾಗಿ ಸುಂದ್ರಮ್ಮನ ಗಂಟಲು ಕಟ್ಟಿ ಬಂದಿತು.

ಶಿವನ್ ಕೃತಜ್ಞತೆಯಿಂದ ಸುಂದ್ರಮ್ಮನಿಗೆ ತಲೆಬಾಗಿ ವಂದಿಸಿದನು. ಅವನ ಕಣ್ಣುಗಳಲ್ಲಿ ಏಕೋ ಆನಂದದ ಕಂಬನಿಗಳು ಮೂಡಿ ಬಂದುವು. ಅವನ್ನು ಬೆರಳಿನಿಂದೊಗಸುತ್ತಾ ಅವನುಸುರಿದನು.

" ನೀನು ಹೇಳಿದಂತೆಯೇ ಮಾಡುವೆನು, ಸುಂದ್ರಮ್ಮ! " ಶಿವನ ಸ್ವರ ಕಂಪಿಸುತಿತ್ತು. ಒಂದೊಮ್ಮೆಗೆ ಎಂಜಲು ನುಂಗಿಕೊಂಡು ಹೇಳಿದ ನವನು " ಈಗಲೇ ಹೋಗಿ ಕೇಳುತ್ತೇನೆ ;ಆಗದೇ ಅಮ್ಮ? "

" ಆದೀತು " ಸುಂದ್ರಮ್ಮ ಹೇಳಿದಳು " ಚೆಟ್ಟಿಯಾರರು ಹೊರ ಜಗಲಿಯಲ್ಲಿ ಒಬ್ಬರೇ ಕುಳಿತಿದ್ದಾರೆ. ಈಗಲೇ ಒಳ್ಳೆಯ ಸಮಯ...."

ಶಿವನ್ ಕೂಡಲೇ ಜಗಲಿಯೆಡೆಗೆ ಹೊರಟನು. ನಡೆಯುತ್ತಲೇ ಅವನಿಗೆ ಶೀಲೆಯ ನೆನಪಾಯಿತು. ಕಾಲುಗಳೇಕೋ ತಟ್ಟನೆ ನಿಂತು ಕೊಂಡುವು. ಮನಸ್ಸಲ್ಲೇಕೋ ಎಲ್ಲಿಲ್ಲದ ಕಳವಳವು ತುಂಬಿ ಬಂದಿತು. ' ಶೀಲೆ, ಶೀಲೆ ' ಎಂದವನು ಗುಣುಗುಟ್ಟಿಕೊಂಡನು ತನ್ನನ್ನು ಇಲ್ಲಿಗೆ ಕರೆದು ತಂದುದು ಶೀಲೆ ತಾನು ಶಾಲೆಗೆ ಹೋಗುವಂತಾದುದು ಶೀಲೆ ಯಿಂದಾಗಿ. ತನಗೆ ಬ್ಯಾಂಕಿನಲ್ಲಿ ಕೆಲಸ ದೊರೆತುದಕ್ಕೂ ಶೀಲೆಯೇ ಕಾರಣ ಈಗ ಅಂಗಡಿ ತೆರೆಯುವ ಮೊದಲು ಶೀಲೆಯೊಡನೆ ಕೇಳ ಬೇಡವೇ ?... ಇಲ್ಲ! ಇಲ್ಲ! ಅಂಗಡಿ ತೆರೆದು, ತಾನೀ ಮನೆಯನ್ನು ಕಾಣಲೆಂತು? ಶೀಲೆಯೊಡನೆ ಮಾತಾಡಲೆಂತು?....

ಶಿವನ್ ಮುಂದೆ ನಡೆಯದಾದನು ಅಸ್ಥಿರತೆಯಿಂದ ಅವನ ಮನಸು ಹೊಯ್ದಾಡಿತು:

" ಶೀಲೆಯೊಡನೆ ಕೇಳದಿದ್ದರೇನಾಯಿತು? ತನ್ನ ಅಭ್ಯುದಯವೇ ಅವಳ ಮನಸ್ಸಿನಲ್ಲಿರುವುದಲ್ಲವೇ? ತನಗೆ ಗುಮಾಸ್ತನ ಕೆಲಸ ದೊರೆಯು

ಲಿಲ್ಲವೆಂದು ಅವಳೇಕೆ ಅಷ್ಟು ಕಳವಳಪಟ್ಟಳು ? ತನ್ನ ಜೀವನದ ಪ್ರಗತಿ ಯನ್ನು ಗ್ರಹಿಸಿಯಲ್ಲವೇ ? ....ಈಗ ಪೇದೆಯ ಕೆಲಸ ಬಿಟ್ಟು, ಅಂಗಡಿ ಹಿಡಿದರೆ ಅವಳೇಕೆ ನೊಂದುಕೊಂಡಾಳು ? ಇಲ್ಲ, ಅವಳು ನೊಂದು ಕೊಳ್ಳಲಿಕ್ಕಿಲ್ಲ; ಮಾತ್ರವಲ್ಲ; ಅವಳಿಗೆ ಸಂತೋಷವೇ ಆದೀತು. ಒಂದು ವೇಳೆ ಅವಳಿಲ್ಲಿ ಇರುತಿದ್ದರೆ ಸಂತೋಷದಿಂದ ಒಪ್ಪಿಗೆ ಕೊಡುತಿದ್ದಳಲ್ಲ · ಅವಳಿಲ್ಲಿ ಇರುತಿದ್ದರೆ.... ಇಲ್ಲ ! ಇಲ್ಲ ! ನಾನು ಹೊರಟು ಹೋದರೆ.... ಶೀಲೆಯನ್ನು ಕಾಣಲೆಂತು ? ಶೀಲೆಯ ಸಾನ್ನಿಧ್ಯವಿಲ್ಲದೆ ಸಮಯ ಹೇಗೆ ಉರುಳೀತು ?........ ''

ಶಿವನ್ ಅಲ್ಲಿಯೇ ಕಲ್ಲೊಂದರಮೇಲೆ ಕುಕ್ಕರಿಸಿ ಕುಳಿತುಕೊಂಡನು. ಚೆಟ್ಟಿಯಾರರ ಬಳಿಗೆ ನಡೆಯಲು ಅವನಿಗೆ ಕಾಲೇ ಬರಲಿಲ್ಲ ಒಂದು ಕಡೆಯಿಂದ, ಮುಂದೆ ಬರಬೇಕೆಂಬಾಸೆ ಅವನನ್ನು ಚೆಟ್ಟಿಯಾರರ ಬಳಿಗೆ ಎಳೆದೂ ಎಳೆಯುತಿತ್ತು ಇನ್ನೊಂದು ಕಡೆಯಿಂದ, ಶೀಲೆಯನ್ನು ಅಗಲ ಬೇಕಲ್ಲಾ ಎಂಬ ಉರಿ ಪ್ರಬಲವಾಗಿ ಹಿಂದಕ್ಕೆಳೆಯುತ್ತಿತ್ತು. ಇವೆರಡು ಸೆಳೆತಗಳ ನಡುವೆ, ಶಿವನ್ ತನಗೆ ಕೈಗೊಟ್ಟು ಕಲ್ಲಗೊಂಬೆಯಂತೆ ಕುಳಿತು ಬಿಟ್ಟನು.

“ ಶಿವನ್, ಇಲ್ಲಿ ಯಾಕೆ ಕುಳಿತಿದ್ದೀಯೋ ? ''

ಶಿವನ್ ಬೆದರಿ, ತಲೆಯೆತ್ತಿ ನೋಡಿದನು. ಸುಂದ್ರಮ್ಮ ನಿಂತು ಕೊಂಡಿದ್ದಳು.

“ ಯಾಕೆ ಇಲ್ಲಿ ಕುಳಿತಿರುವೆ, ಶಿವನ್ ? '' ಗಾಬರಿಯಿಂದ ಸುಂದ್ರಮ್ಮ ಕೇಳಿದಳು “ ಚೆಟ್ಟಿಯಾರರು ಬೇಡ ಅಂದರೇ ? ''

“ ಇಲ್ಲ ! '' ಶಿವನು ತಲೆಯಲ್ಲಾಡಿಸಿದನು

“ ಮತ್ತೆ ಮುಖವೇಕೆ ಇಷ್ಟು ಬಾಡಿದೆ ? '' ಕಾತರದಿಂದ ಕೇಳಿದ ಳಾಕೆ.

ಶಿವನು ಮಾತಾಡಲಿಲ್ಲ. ತಲೆ ತಗ್ಗಿಸಿದನು. ಅವನ ಭುಜದ ಮೇಲೆ ಕೈಯಿಟ್ಟು ಗಾಬರಿಯಿಂದ ಸುಂದ್ರಮ್ಮ ವಿಚಾರಿಸಿದಳು.

“ ಏನಾಯಿತು, ಶಿವನ್ ? ಹೇಳಬಾರದೇ ? ''

“ ನಾ ಅವರನ್ನು ನೋಡಿಯೇ ಇಲ್ಲ ! ” ಶಿವನಂದನು.

" ನೋಡಿಯೇ ಇಲ್ಲ ! ಅಂದರೆ ?.... "

ಶಿವನ್ ಉತ್ತರ ಕೊಡಲಿಲ್ಲ. ಸಂಕಟದಿಂದ ಸುಂದ್ರಮ್ಮಳನ್ನು ನೋಡಿದನು.

" ಹೂಂ....ಹೂಂ ತಡ ಮಾಡಬೇಡ " ಸುಂದ್ರಮ್ಮ ಶಿವನನ್ನು ಹಿಡಿದೆತ್ತಿ ಮುಂದೂಡುತ್ತಾ ಉತ್ಸಾಹಗೊಳ್ಳುವಂತೆ ಕೇಳಿದಳು " ನೀನೇನೂ ಭಯ ಪಡಬೇಕಾಗಿಲ್ಲ, ಶಿವನ್ ! ಚೆಟ್ಟಿಯಾರರು ಅಂತಹ ಮನುಷ್ಯರಲ್ಲ. ಅವರು ಒಪ್ಪಿಯೇ ಒಪ್ಪುತ್ತಾರೆ. ಹೂಂ.... ನೋಡುತ್ತೀಯೇನು ? ನಡೆ ಮುಂದೆ.... "

ಶಿವನ್ ಕಾಲುಗಳನ್ನೆಳೆದುಕೊಂಡು, ಮುಂದೆ ನಡೆದನು. ಇವನ ಆಗಮನವನ್ನು ಕಾಯುತ್ತಾ ಇರುವಂತೆ, ಚೆಟ್ಟಿಯಾರರು ರೇಡಿಯೋ ಗ ನವನ್ನು ಕೇಳುತ್ತಾ ಕುಳಿತಿದ್ದರು.

ಜಗಲಿಯಲ್ಲಿ ನಿಂತ ಶಿವನಿಗೆ ಅವರನ್ನು ಕಂಡು ಏಕೋ ಮೈ ಜುಮ್ಮೆಂದಿತು. ಹೊಟ್ಟೆಯಲ್ಲಿ ಕಸಿವಿಸಿಯಾಯಿತು. ತುಟಿಗಳು ಕಂಪಿಸಿ ಮವು ನಾಲಿಗೆ ಒಣಗಿತು. ಕಾಲುಗಳು ತತ್ತರಿಸಿದುವು.

" ಹೋ ! ಶಿವನ್ ? ಏನು ಬಂದೆ ? " ಎಂದು ಚೆಟ್ಟಿಯಾರರು ಕೇಳಿದಾಗ, ಧೈರ್ಯ ತಂದುಕೊಂಡು ಅವನೆಂದನು.

"ಸಾಂಥೋಮಿನ ಮೂಲೆಯಲ್ಲಿ ಒಂದು ಬೀಡಾ-ಸಿಗರೇಟು ಅಂಗಡಿ ಖಾಲಿ ಬೀಳಲಿದೆ. ಅಂಗಡಿ ತೆಗೆಯಬೇಕೆಂದು ನನಗಾಶೆಯಿದೆ.... "

" ಅಂದರೆ ? " ಪ್ರಶ್ನಿಸಿದರು ಚೆಟ್ಟಿಯಾರರು.

" ಅಂದರೆ ಬ್ಯಾಂಕಿನ ಕೆಲಸದಿಂದ ನನಗೆ ಬಿಡುಗಡೆ ಮಾಡಬೇಕೆಂದು ಬೇಡುತ್ತೇನೆ.... "

ತುಸು ಹೊತ್ತು ಸುಮ್ಮನಾಗಿದ್ದು ಚೆಟ್ಟಿಯಾರರು ಕೇಳಿದರು.

" ವ್ಯಾಪಾರದಲ್ಲಿ ಜೀವನ ಸಾಗಿಸುವಷ್ಟು ಸಂಪಾದನೆಯಾದೀತು ಎಂದು ನಿನಗೆ ನಂಬಿಗೆಯಿದೆಯೇ ? "

" ಏ ಣೇ ನಿಮ್ಮ ಕೃಪೆಯಿದ್ದರೆ.... "

" ಆಹಾಂ ! ನನ್ನಿಂದೇನೂ ಅಡ್ಡಿಯಿಲ್ಲ; ಇಂದೇ ಬೇಕಾದರೆ ಬ್ಯಾಂಕಿನ ಕೆಲಸದಿಂದ ನಿನ್ನನ್ನು ಬಿಡಿಸುವೆನು. ಆದರೆ ನಿನ್ನ ಜೀವನ

ಸುಸೂತ್ರವಾಗಿ ಸಾಗಬೇಕೆಂಬುದೇ ನನ್ನಾಶೆ. ನಿನಗೆ ಅಂಗಡಿಯಲ್ಲಿ ಬದುಕು ಸಾಗೀತೆಂದು ಅನಿಸಿದರೆ ನನ್ನಿಂದೇನೂ ಆಕ್ಷೇಪವಿಲ್ಲ.... ”

ಶಿವನ್, ಶೇಖರನ್ನಾಯರನ ಅಂಗಡಿಯ ವಿಷಯ, ವ್ಯಾಪಾರದಲ್ಲಿ ತನಗಿದ್ದ ಅನುಭವದ ವಿಷಯ ಹೇಳಿಕೊಂಡನು.

“ ಹಾಗಾದರೆ ಸರಿ. ಅಂಗಡಿ ಖಾಲಿಯಾದಾಗ ನೀನು ಸೇರಿಕೋ. ನಿನ್ನ ಸಂಬಳ, ಇಲ್ಲಿಗೆ ಬಂದಂದಿನಿಂದ ಸುಮಾರು ನಾನ್ನೂರು ರೂಪಾಯಿ ಆಗುತ್ತದೆ ಕಾಣುತ್ತದೆ. ಅದನ್ನು ನೀನು ಬೇಕಾದಾಗ ತೆಗೆದುಕೊಳ್ಳಬಹುದು. ಅದೂ ಸಾಲದಿದ್ದರೆ ನನ್ನೊಡನೆ ಹೇಳು. ನಾನು ಸಹಾಯ ಮಾಡುವೆನು.... ”

ಶಿವನಿಗೆ ಅಷ್ಟೊಂದು ಉತ್ಸಾಹ ಉಕ್ಕೇರಿತು. ಸಮಸ್ಯೆ ಇಷ್ಟು ಸುಲಭದಲ್ಲಿ ಬಗೆ ಹರಿಯುತಿತ್ತೆಂದು ಅವನೂಹಿಸಿರಲಿಲ್ಲ. ಈ ಉತ್ಸಾಹದ ಉಕ್ಕಿನಲ್ಲಿ ಅವನಿಗೆ ಶೀಲೆಯಿಂದ ಅಗಲಿ ಇರಬೇಕಾದ ವಿಷಯ ಮರೆತು ಹೋಯಿತು. ಚೆಟ್ಟಿಯಾರರ ಔದಾರ್ಯ ಅವನ ಕಣ್ಣುಗಳಲ್ಲಿ ನೀರುಕ್ಕಿಸಿತು. ನಮ್ರನಾಗಿ ವಂದಿಸಿ, ಶಿವನ್ ತನ್ನ ಕೋಣೆ ಸೇರಿದನು.

ಸುಂದ್ರಮ್ಮ ಅಲ್ಲಿ ಅವನಿಗಾಗಿ ಕಾದು ಕುಳಿತಿದ್ದಳು.

---

## ೧೬

ಶೀಲೆಗೆ ದಿನವು ನಿಮಿಷದಂತೆ ಅನಿಸುತಿತ್ತು.

ಮಲಬಾರ್ ಹಿಲ್ಲಿನಲ್ಲಿರುವ ಮಾವನ ಮನೆಯಿಂದ ಬೆಳಿಗ್ಗೆ ಹೊರಟರೆ, ಆಕೆ ಮಧ್ಯಾಹ್ನಕ್ಕೆ ಮಾತ್ರ ಮನೆ ಸೇರುತಿದ್ದಳು. ಕೆಲವು ದಿನ ರಾತ್ರಿಯೂ ಆಗುತಿತ್ತು. ಖುಷಿ ಬಂದಲ್ಲಿ ತಿರುಗಲು ಸುಂದರ ‘ ಬ್ಯಾಕ್ ಎಂಟು ’ ಕಾರಿತ್ತು. ಕಾರನ್ನು ಡ್ರೈವ್ ಮಾಡಲು, ಇದ್ದ ಬಿದ್ದ ಸ್ಥಳಗಳನ್ನು ತೋರಿಸಲು ರಂಗನಾಥನ್ ಇದ್ದನು! ರಂಗನಾಥನ ಪಕ್ಕ

ದಲ್ಲಿ ಕುಳಿತು ಅವಳು ಸಮಯವನ್ನೇ ಮರೆಯುತ್ತಿದ್ದಳು! ಶುದ್ಧ ಆಂಗ್ಲ ರೀತಿಯ ಪೋಷಾಕು ಧರಿಸಿ, ಸುಂದರನಾಗಿ ಕಾಣಿಸುವ ರಂಗನಾಥನ ಸಾಮೀಪ್ಯ. ಶೀಲೆಗೆ ಮೈ ಮರೆಯುವಂತೆ ಮಾಡುತ್ತಿತ್ತು! ಕಾರಿನಲ್ಲಿ ರಂಗನಾಥನ್ 'ಶೀಲೆ! ಇಗೋ ಇದು ನೋಡು! ಶೀಲೆ, ಅದೋ ಅದು ನೋಡು' ಎಂದು ಉತ್ಸಾಹದಿಂದ ಹೇಳುವಾಗ, ಅವಳು ರಂಗನಾಥನ್ ತೋರಿಸಿದ ಯಾವದರೆಡೆಗೂ ದೃಷ್ಟಿ ಬೀರದೆ, ಅವನ ಸುಂದರ ಮೊಗದ ಮೇಲೆ ತನ್ನ ಕಣ್ಣುಗಳನ್ನಿರಿಸಿಕೊಳ್ಳುತ್ತಿದ್ದಳು!

ಮುಂಬಯಿಗೆ ಬಂದ ಮೊದಲ ವಾರವು ಬಹಳ ಬೇಸರವಾಗಿ ಕಂಡಿತ್ತಾಕೆಗೆ. ಅವಳ ಮಾವ ಬೆಳಗ್ಗೆ ಒಂಭತ್ತು ಗಂಟೆಗೆ ತಮ್ಮ ಮಿಲ್ಲಿಗೆ ಹೊರಟು ಹೋದರೆ, ಅಲ್ಲಿ ಇಲ್ಲಿ ಸುತ್ತಿ ಮುಚ್ಚಂಜೆಗೆ ಮಾತ್ರ ಮನೆ ಸೇರುತಿದ್ದರು. ಮನೆಯೊಳಗೆ ಅತ್ತೆಯೊಡನೆ ಹರಟೆ ಕೊಚ್ಚುತ್ತ ಅವಳು ಮುಚ್ಚಂಜೆಯ ತನಕ ಕಾಲ ತಳ್ಳಬೇಕು. ಮಾವ, ಅವಳನ್ನು ಸಂಜೆ ಹೊರಗೆ ಕರಕೊಂಡು ಹೋಗುತಿದ್ದರು ಆದರೆ ಅತ್ತೆಯೊಡನೆ ಹಗಲಿಡೀ ಏನು ಮಾತುಕತೆ ನಡೆಯಿಸಬಹುದು?

ಶೀಲೆಯ ಅತ್ತೆ ಇದನ್ನು ಅರಿತುಕೊಂಡೇ ಹೇಳುತಿದ್ದಳು.

"ಬೇಸರವಾಗುತ್ತೇನು ಶೀಲಾ? ಇರಲಿ ನಾಲ್ಕೈದು ದಿನಗಳಲ್ಲಿ ರಂಗ ಬರುವನು. ಅವನು ಬಂದರೆ ಮತ್ತೇನೂ ಕಷ್ಟವಾಗಲಿಕ್ಕಿಲ್ಲ ಬಿಡು. ನಿನ್ನನ್ನು ಅತ್ತಿತ್ತ ತಿರುಗಿಸಲು ಅವನೊಡನೆ ಹೇಳುತ್ತೇನೆ...."

ಆ ದಿನಕ್ಕಾಗಿ ಅವಳು ಎಷ್ಟು ಕಾತರದಿಂದ ಕಾದಳು! ಮನೆಯ ಪ್ರತಿಯೊಂದು ಕೋಣೆಯ ಗೋಡೆಯಲ್ಲಿ ರಾರಾಜಿಸುವ ರಂಗನಾಥನ ಛಾಯಾ ಚಿತ್ರಗಳನ್ನು ಕಂಡು, ಅವನ ವ್ಯಕ್ತಿತ್ವವನ್ನು ಅವಳು ಮನಸ್ಸಿನಲ್ಲೇ ಚಿತ್ರಿಸಿಕೊಂಡಿದ್ದಳು. ಅವನ ಬಗ್ಗೆ ಅವಳಲ್ಲಿ ಅಪೂರ್ವವಾದ ಆದರವು ಉದ್ಭವಿಸಿದ್ದಿತು. ಅವನನ್ನು ಮುಖತಃ ಕಾಣುವ ಭಾಗ್ಯವು ಲಭಿಸಿದಾಗ ಏಕೋ ಅವಳೆದೆಯು ಅಸ್ಥಿರತೆಯಿಂದ ನಡುಗದೆ ಇರಲಿಲ್ಲ!

ಮಾವನೊಡನೆ ಶೀಲೆ ವಿಮಾನ ನಿಲ್ದಾಣಕ್ಕೂ ಹೋಗಿದ್ದಳು. ವಿಮಾನ ಬಂದು ತಂಗಿದಾಗ, ಮಾವ ಆತುರ ಉದ್ವೇಗದಿಂದ ತುಸು ಮುಂದೆ ನಡೆದಿದ್ದರು. ಶೀಲೆ ಹಿಂದೆಯೇ ಉಳಿದಳು. ತುಸು ಹೊತ್ತಿನಲ್ಲಿ ಮಾವನೊಡನೆ ಭವ್ಯಾಕಾರದ ಸುಂದರ ವ್ಯಕ್ತಿ, ಶೀಲೆಗೆ ಕಾಣಿಸಿದರು.

ಶೀಲೆಯನ್ನು, ಮಗನಿಗೆ ತೋರಿಸುತ್ತಾ ಮಾವ ಕೇಳಿದರು.

“ ರಂಗ! ಈ ಹುಡುಗಿ ಯಾರೆಂದು ಹೇಳು ನೋಡೋಣ ! ”

ತಟ್ಟನೆ ಶೀಲೆಯ ಶೀರ ಸಮೀಪಕ್ಕೆ ಸರಿದು ನೆಟ್ಟ ದೃಷ್ಟಿಯಲ್ಲಿ ಶೀಲೆ ಅವನ ಹುಡುಗಾಟಿಕೆಯ ನೋಟವನ್ನು ಒಂದು ನಿಮಿಷ ಎದುರಿಸಿ ತಲೆ ಬಾಗಿದಳು, ನಾಚಿಕೆಯಿಂದ.

“ ಹಾಂ! ತಲೆ ತಗ್ಗಿಸಬೇಡ! ನಿನ್ನನ್ನು ಎಲ್ಲಿಯೋ ನೋಡಿದ್ದೇನೆ ನಾನು! ಎಲ್ಲಿ?.... ಹಾಂ! ಈಗ ನೆನಪಾಯಿತು! ಈಗ ಮಾತ್ರ ಖಂಡಿತ ನೆನಪಾಯಿತು! ಏ ಹುಡುಗಿ, ತಲೆಯೆತ್ತಿ ನಿನ್ನ ಮುಖವನ್ನು ತೋರಿಸು ನೋಡೋಣ! ಅಪ್ಪಾ! ಶೀಲೆಗೆ ಎಷ್ಟು ನಾಚಿಕೆ! ”

ಶೀಲೆಯ ಮಾವ ನಗಾಡಿದರು ಶೀಲೆಯ ಕೆನ್ನೆಗಳು ಕೆಂಬಣ್ಣವನ್ನು ತಾಳಿದುವು !

“ ಊಹೂಂ! ” ತಲೆಯಲ್ಲಾಡಿಸುತ್ತಾ ರಂಗನಾಥನೆಂದ ‘ ತಲೆ ತಗ್ಗಿಸಿ, ಮುಖ ಕೆಂಪು ಮಾಡಿಕೊಂಡರೆ ಮಾತ್ರ ಸ್ವಾಗತ ಬಯಸಿದಂತಾಗಲಿಲ್ಲ ಶೀಲಾ! ಎಲ್ಲಿ, ನಿನ್ನ ಕೈ ನೀಡು! .... ಹೀಗೇ ಕುಲುಕುತ್ತಾ ‘ ಹೌ-ಡು-ಯು-ಡು ’ ಎಂದು ಹೇಳಲ್ಲ!.... ”

ಅವನು, ತನ್ನ ಕೈ ಹಿಡಿದು ಕುಲುಕುವಾಗ ಶೀಲೆಗೆ ರೋಮಾಂಚವಾಗಿತ್ತು ಆದರೆ ಅವನ ಉಲ್ಲಾಸದ ಲಘು ನುಡಿಗಳನ್ನು ಆಲಿಸುವಾಗ ಸಂತೋಷವಾಗದೆ ಇರಲಿಲ್ಲ. ಅವಳು ಮಧುರವಾಗಿ ನಕ್ಕಳು ನಾಚಿಕೆಯ ಮುಸುಕಿನಲ್ಲಿ ಅರಳಿದ ಆ ನಗು. ರಂಗನಾಥನಿಗೆ ಮೋಹಕವಾಗಿ ಕಂಡಿತು.

ರಂಗನಾಥನ್ ಉತ್ಸಾಹದಿಂದ ಕೇಳಿದನು.

“ ಶೀಲೆ! ನಿನ್ನನ್ನು ಕಂಡ ಕೂಡಲೇ ನಾ ಗುರುತು ಕಂಡುಹಿಡಿದೆ ನಿಜ ಆದರೆ... ”

“ ಇಲ್ಲೇಕೆ ಮಾತನಾಡಿ ಸಮಯ ಕಳೆಯುವುದು ? ಮನೆಯಲ್ಲಿ ನಿನಗಾಗಿ ನಿನ್ನ ತಾಯಿ ಕಾದು ಕುಳಿತಿದ್ದಾಳೆ ಹೂಂ. ಮುಂದೆ ನಡೆ.... ” ರಂಗನಾಥನ ತಂದೆ ಮಾತನ್ನು ತಡೆದರು.

ರಂಗನಾಥನ್ ಶೀಲೆಯ ಕೈ ಹಿಡಿದು ತಂದೆಯ ಹಿಂದೆ ನಡೆದನು. ಶೀಲೆಗೆ ನಾಚಿಕೆಯಾಯಿತು. ಇಂಗ್ಲೆಂಡ್ ವಾಸದ ಫಲವೇನೋ ಎಂದಾಕೆ ಊಹಿಸಿಕೊಂಡಳು! ರಂಗನಾಥನ್ ತುಂಟತನದಲ್ಲಿ ಕೇಳಿಯೇ ಬಿಟ್ಟ.

" ನಾಚಿಕೆಯಾಗುತ್ತಿದೆಯೇ ? "

ಧೈರ್ಯದಿಂದ ಉತ್ತರರೂಪವಾಗಿ ಶೀಲೆ ಕೇಳಿದಳು

" ಆಗುತ್ತದೆ ಅಂದರೆ ಕೈ ಬಿಡುವಿರಾ ? "

" ಇಲ್ಲ ! ಖಂಡಿತ ಬಿಡಲಿಕ್ಕಿಲ್ಲ ! "

ರಂಗನಾಥನ್ ನಗಾಡಿದನು ಶೀಲೆಯೂ ತನ್ನ ನಗುವನ್ನು ಸೇರಿಸಿದಳು

' ಇದೇನು ಹುಡುಗಾಟಿಕೆ ' ಎಂದು ಮುದುಕರಾದ ಶೀಲೆಯ ಮಾವ ಕನ್ನಡಕದ ಮೂಲಕ ಅಸಮಾಧಾನದಿಂದ ಒಮ್ಮೆಗೆ ನೋಡಿದರೂ ' ಹೇಗೂ ಗಂಡ-ಹೆಂಡತಿಯಾಗುವವರೇ ಅಲ್ಲವೆ ? ' ಎಂದೆಣಿಸಿ ಮನಸ್ಸಿಗೆ ಶಾಂತಿಯನ್ನು ತಂದುಕೊಂಡು, ಕಾರಿನಲ್ಲಿ ಕುಳಿತುಕೊಂಡರು ಕುಳಿತು ಕೊಳ್ಳುತ್ತಲೇ ಆವಸರದಲ್ಲಂದರು

" ರಂಗ ! ಏನಿದು ಹುಡುಗಾಟಿಕೆ ? ಕಾರಿನಲ್ಲಿ ಕುಳಿತುಕೊಳ್ಳ ಬಾರದೇ ಒಮ್ಮೆ ? "

" ಇಗೊಳ್ಳಿ ! ನಾವು ಕಾರಿನೊಳಗೇ ಇರುವೆವಲ್ಲ ! " ಕಾರ್ರೊಳಗೆ ಕುಳಿತುಕೊಳ್ಳುತ್ತಾ ನಕ್ಕನವನು.

ರಂಗನಾಥನ ಉಲ್ಲಾಸದ ಮಾತುಗಳು, ಸರಳ ಹೃದಯ ಸುಂದರ ರೂಪ, ಶೀಲೆಯ ಮನವನ್ನು ಸೆಳೆದುವು. ಅವಳೆದೆಯಲ್ಲಿ ರಂಗನಾಥನ ಬಗ್ಗೆ ಅಪೂರ್ವ ಆದರವು ತುಂಬಿಕೊಂಡಿತು.

ಮರುದಿನ ಬೆಳಗ್ಗೆ ಉಪಹಾರ ಸೇವಿಸುತ್ತಿರುವಾಗ ರಂಗನಾಥನ್ ಹೇಳಿದ:

" ಶೀಲಾ ! ಬೇಗನೇ ಸ್ನಾನ ಮಾಡಿ ಹೊರಟು ತಯಾರಾಗಿರು ! "

" ಎಲ್ಲಿಗೆ ? " ಎಂದು ಪ್ರಶ್ನಿಸುವಂತೆ ಶೀಲೆ ಅವನನ್ನು ನೋಡಿದಳು.

“ ಎರಡು ವರ್ಷಗಳಾದುವು ಮುಂಬಯಿ ನೋಡದೆ. ನೀನು ಮನೆಯೊಳಗೆ ಕುಳಿತು ಏನು ಮಾಡಬೇಕು? ನನ್ನೊಡನೆ ಬರಬಾರದೇ ತಿರುಗಾಡಲು? ”

“ ನಾನು ಮೊನ್ನೆಯಿಂದಲೇ ಹೇಳುತಿದ್ದೇನೆ ” ರಂಗನಾಥನ ತಾಯಿಯೆಂದಳು “ ನೀನು ಬಂದರೆ ಶೀಲೆಯನ್ನು ಸುಮ್ಮನೆ ಕುಳಿತುಕೊಳ್ಳಲು ಬಿಡಲಾರೆಯೆಂದು.... ”

“ ಹೌದು ನಾನು ಬಿಡಲಿಕ್ಕಿಲ್ಲ. ಶೀಲೆ! ನೀನು ಬರಲಿಕ್ಕೇ ಬೇಕು! ” ರಂಗನಾಡಿದನು.

“ ನೀನು ಬರಲಿಕ್ಕೇಬೇಕೆಂದು ಒತ್ತಾಯ ಮಾಡುವುದೇಬೇಡ. ಅವಳಿಗಿಲ್ಲಿ ಬೇಸರದಿಂದ ಸಮಯವೇ ಹೋಗುವುದಿಲ್ಲ. ನಿನಗಾಗಿ ಅವಳೆಷ್ಟು ದಿನ ಕಾದು ಕುಳಿತಿದ್ದಳು. ಅಲ್ಲವೇ ಶೀಲಾ? ” ಶೀಲೆಯ ಅತ್ತೆ ಹೇಳಿದಳು.

ಶೀಲೆಗೇಕೋ ನಾಚಿಕೆಯಾಯಿತು.

“ ಹಾಗೇನು? ಹಾಗಾದರೆ ಕೂಡಲೇ ಹೊರಡು. ತಡ ಮಾಡಬೇಡ ” ರಂಗನಾಥನೆಂದನು.

ಶೀಲೆ ಉತ್ಸಾಹದಿಂದ ಸ್ನಾನಗೃಹಕ್ಕೆ ತೆರಳಿದಳು. ರಂಗನಾಥನೊಡನೆ ಒಬ್ಬಳೇ ಆಗಿ ತಿರುಗಾಡಲು ಹೊರಡಲು ಅವಳಿಗೇನೋ ನಾಚಿಕೆಯೆನಿಸುತಿತ್ತು. ಆದರೂ ನಗರ ನೋಡುವ ಹುಮ್ಮಸ್ಸು ಒಂದು ಕಡೆ, ಕೆಲವೇ ಮಾತುಗಳಲ್ಲಿ ತನಗೆ ತೀರ ಹತ್ತಿರದವನೆಂದು ಅನಿಸಿದವನ ಸಾಮೀಪ್ಯದ ಹೆಬ್ಬಯಕೆ ಇನ್ನೊಂದು ಕಡೆ; ಇವೆರಡು ಶಕ್ತಿಗಳು ಅವಳನ್ನು ನಾಚಿಕೆಯ ಗಡಿಯಿಂದ ಹೊರಗೆಳೆದು ತಂದಿದ್ದುವು. ಉತ್ಸಾಹದಿಂದ ಹಾಡೊಂದನ್ನು ಗುಣುಗುಟ್ಟುತ್ತ ಆಕೆ ಸ್ನಾನ ತೀರಿಸಿ ಹೊರಡುವ ತಯಾರಿ ನಡೆಸಿದಳು. ತನ್ನ ಹುಟ್ಟು ಹಬ್ಬದ ದಿನ ತಂದೆ ಕೊಟ್ಟ ಹಸುರು ಬಣ್ಣದ ಸೀರೆಯನ್ನು, ಗುಲಾಬಿ ಬಣ್ಣದ ರವಕೆಯನ್ನೂ ತೊಟ್ಟುಕೊಂಡಳು. ಮುಖದ ಮೇಲೆ ಪೌಡರನ್ನು ಸವರಿಕೊಂಡಳು. ಬಾಚಿದ ತಲೆಗೂದಲ ಮೇಲೆ ಬೆರಳುಗಳನ್ನಾಡಿಸಿಕೊಂಡಳು.

ಕೋಣೆಯಿಂದ ಹೊರಬರಲು ಬಾಗಿಲಲ್ಲಿಯೇ ರಂಗನಾಥನ್ ಸುಸಜ್ಜಿತನಾಗಿ ನಿಂತುಕೊಂಡಿದ್ದನು.

" ಎಲೆಲಾ ! ಸಿಂಗರಿಸಿಕೊಳ್ಳುವುದರಲ್ಲಿ ನೀನೆಷ್ಟು ಜಾಣೆ ! ಎಷ್ಟು ಚಂದವಾಗಿ ಕಾಣಿಸುತ್ತೀ.... " ರಂಗನಾಥನ್ ಬೆರಳು ಕಚ್ಚಿ ಉದ್ಗರಿಸಿದನು.

ಶೀಲೆ ಉಬ್ಬಿಹೋದಳು ! ಜಿಂಕೆಯಂತೆ ಅವನ ಬಳಿಗೆ ಸರಿದಳು.

" ಹೋಗೋಣ ? " ಎಂದು ಮುಗುಳು ನಗುತ್ತಾ ಮೋಹಕವಾಗಿ ಕೇಳಿದಳು.

" ಹುಂ ! ಹೊರಡುವ.... " ರಂಗನಾಥನ್ ಮುಂದಡಿಯಿಟ್ಟನು.

ಸಕ್ಕನೆ ಏನೋ ನೆನಪಾದವನಂತವನಾಗಿ ಹಿಂದೆ ತಿರುಗಿ, ಶೀಲೆಯ ಕೈ ಹಿಡಿದು ನಗುತ್ತಾ ಅಂದನು

" ನಾಚಿಕೆಯಾಗುವುದಿಲ್ಲವಷ್ಟೆ ! "

" ಆಗುತ್ತದೆ ಅಂದರೆ ಕೈ ಬಿಡುವಿರಾ ? " ಶೀಲೆ ವಯ್ಯಾರದಿಂದ ಕೇಳಿದಳು. ರಂಗನಾಥನ್ ಗಟ್ಟಿಯಾಗಿ ನಕ್ಕ. ಶೀಲೆ ತನ್ನ ನಗುವಿನ ಇಸಿದನಿಯನ್ನೂ ಸೇರಿಸಿ ಮುಂದಡಿಯಿಟ್ಟಳು. ಇದನ್ನು ಹಿಂದಿನಿಂದ ನಿಂತು ನೋಡಿದ ರಂಗನಾಥನ ತಾಯಿಯ ಹುಬ್ಬುಗಳು ಮೇಲೇರಿದುವು; ತುಟಿಗಳ ಮೇಲೆ ಸುಖದ ನಸುನಗುವೊಂದು ಮೂಡಿ ಬಂದಿತು !

ಇಬ್ಬರೂ ಕೆಳಗಿಳಿದು ಕಾರೇರಿದರು ರಂಗನಾಥನ್ ಡ್ರ್ಯೈವರನ ಆಸನದಲ್ಲಿ ಕುಳಿತನು. ಶೀಲೆ ಅವನ ಪಕ್ಕದಲ್ಲೇ ಕುಳಿತಳು. ಕಾರು ಮುಂದೋಡಿತು. ಹೀಗೆ ದಿನವೂ ಬೆಳಿಗ್ಗೆ, ಸಂಜೆ ಅವರಿಬ್ಬರು ಅಲೆದಾಡುತ್ತಿದ್ದರು ಮುಂಬಯಿಯ ಹೋಟೆಲುಗಳು, ಥಿಯೇಟರುಗಳು, ಪ್ರೇಕ್ಷಣೀಯ ಸ್ಥಳಗಳು, ವಿಹಾರ ಕೇಂದ್ರಗಳು ಇವರಿಬ್ಬರ ಧಾಳಿಗೆ ತಲೆಭಾಗಬೇಕಾಯಿತು !

ಒಂದು ದಿನ, ಚಲಚಿತ್ರವೊಂದನ್ನು ನೋಡಿ ಶೀಲೆ ಮನೆಗೆ ಬಂದಾಗ ಅವಳ ತಂದೆಯ ಪತ್ರವೊಂದು ಅವಳನ್ನು ಕಾದುಕೊಂಡಿತ್ತು. ಕವರನ್ನೊಡೆದು, ಪತ್ರವನ್ನೋದಿದಾಗ ಅವಳ ಮುಖವಷ್ಟು ಅರಳಿತು ಪತ್ರದಲ್ಲಿನ ಎರಡು ವಾಕ್ಯಗಳನ್ನು ಅವಳು ಎರಡೆರಡು ಬಾರಿ ಓದಿಕೊಂಡಳು. ' ನಿನ್ನ ಪರೀಕ್ಷೆಯ ಫಲಿತಾಂಶವು ಪ್ರಕಟವಾಗಿದೆ. ನೀನು ಪಾಸಾಗಿರುವಿ ' ಪತ್ರವನ್ನು ಓದುತ್ತಾ ಅವಳ ಅರಳಿದ ಮುಖದ ಮೇಲೆ ಮೋಡ ಕವಿದಂತಾಯಿತು ' ಕಾಲೇಜಿಗೆ ಸೇರಬೇಕೆಂದಿದ್ದರೆ ಕೂಡಲೇ ಹೊರಟು ಬಾ '

ಮುಂದೆ 'ವಿ. ಸೂ.' ಹಾಕಿ 'ರಂಗನಾಥನನ್ನು ಒತ್ತಾಯ ಮಾಡಿ ಕರಕೊಂಡು ಬಾ. ನಿನ್ನ ಮಾವನಿಗೆ ನಿನ್ನೆ ಒಂದು ಪತ್ರ ಬರೆದಿದ್ದೆ.''

ಶೀಲೆಗೆ ತಾನು ಪಾಸಾದೆ ಎಂಬ ಸಂತೋಷ ಒಂದೆಡೆ. ಇನ್ನು ಮುಂಬಯಿ ಬಿಟ್ಟು ರಂಗನಾಥನನ್ನು ಅಗಲಿ ಇರಬೇಕಲ್ಲಾ ಎಂಬ ಬೇಸರ ಇನ್ನೊಂದೆಡೆ. ರಂಗನಾಥನನ್ನು ಕರಕೊಂಡೇ ಹೋಗಬಹುದಲ್ಲಾ ಎಂಬ ಸಮಾಧಾನ ಮತ್ತೊಂದೆಡೆ. ಈ ವಿವಿಧ ಭಾವಾವೇಶದಲ್ಲಿ ಶೀಲೆಗೆ ತಾನು ಪಾಸಾದ ಸುದ್ದಿಯನ್ನು ಅರುಹಲು ಉತ್ಸಾಹವೇ ಉಳಿಯಲಿಲ್ಲ. ನಿಶ್ಚಲವಾಗಿ ಕುಳಿತು ಅವಳು ಚಿಂತಿಸಿದಳು.

"....ನಾನು ಕಾಲೇಜು ಸೇರಬೇಕೆ? ಕಲಿತು ಏನು ಮಾಡಬೇಕು? ಕಾಲೇಜವಲ್ಲಿ ಓದಿ ಉಪಯೋಗವಾದರೂ ಏನು?.... ಮನೆಯಲ್ಲಿ ಕುಳಿತು ಮಾಡುವುದೇನು? ಏನೂ ಇಲ್ಲ! ಓದಿ, ಇನ್ನೂ ಹೆಚ್ಚು ಓದಿ ಹೆಚ್ಚಿನ ಜ್ಞಾನ ಸಂಗ್ರಹಿಸಬಹುದಲ್ಲವೇ? ..... ಆದರೆ.... ಆದರೆ.... ಮದರಾಸಿಗೆ ತೆರಳುವುದೆಂದರೆ ಮುಂಬಯಿ ಬಿಡಬೇಕಲ್ಲ! ಮುಂಬಯಿ ಬಿಟ್ಟರೆ.... ಅವರನ್ನು ....ಛೆ! ಛೆ! ನನಗೇಕೆ ಸಂಕೋಚವಾಗುತ್ತದೆ?.... ರಂಗನಾಥನನ್ನು ಬಿಟ್ಟು ಇರಬೇಕಲ್ಲ?.... ಇಲ್ಲ, ನಾನು ತಂದೆಯ ಬಳಿ ಹೇಳುತ್ತೇನೆ, ನಾನು ಮುಂಬಯಿಯಲ್ಲೇ ಕಾಲೇಜಿಗೆ ಹೋಗುತ್ತೇನೆಂದು. ನಾನು ಇಲ್ಲಿಯೆ ಇರುವೆನು ನನಗೆ ಇಲ್ಲಿಯೇ ಸಂತೋಷವಾಗುತ್ತದೆ. ಆದರೆ ಮದರಾಸಿನಲ್ಲಿ ಕಾಲೇಜು ಇದ್ದೂ, ಮುಂಬಯಿ ಏಕೆಂದು ತಂದೆ ತಾಯಿ ಕೇಳಿಯಾರಲ್ಲ!.... ಮದರಾಸಿಗೆ ನಾನು ಹೋಗಲೇಬೇಕಾಗಿದೆ.... ಅವ....ಅವರನ್ನೂ ಕರಕೊಂಡು ಹೋಗುತ್ತೇನೆ.... ಆದರೆ ಮದರಾಸಿನಲ್ಲೇ ಅವರು ನಿಲ್ಲುವರೇ?........ ಕೆಲವು ದಿನ ಇದ್ದು ಹೊರಟುಹೋಗುವರು.... ಅಯ್ಯೊ ಅವರು ಹೊರಟುಹೋಗುವರು!.... ಮತ್ತವರನ್ನು ತಾನು ಎಂದು ಕಾಣುವದೋ?..... ಅವರು ನನ್ನನ್ನು ನೆನಪಿನಲ್ಲಿ ಇಟ್ಟುಕೊಳ್ಳುವರೋ ಇಲ್ಲವೋ........ ''

ಶೀಲೆ ಯೋಚನಾ ಪ್ರಪಂಚದ ಬೆನ್ನು ಹತ್ತಿದ್ದಳು.

"ಶೀಲಾ! ಊಟಕ್ಕೆ ಬರುವುದಿಲ್ಲವೇ?'' ಎಂದು ಅವಳತ್ತೆ ಮೊದಲು ಕೂಗಿದುದೂ ಅವಳಿಗೆ ಕೇಳಿಸಲಿಲ್ಲ. ಶೀಲೆಗೆ, ತನ್ನ ಭುಜ

ವನ್ನು ಯಾರೋ ತಟ್ಟಿದಂತಾದಾಗ ಮಾತ್ರ ಎಚ್ಚರವಾಯಿತಷ್ಟೆ. ಭುಜದ ಮೇಲೆ ಕೈಯಿಟ್ಟು ಅತ್ತೆ ಕೇಳಿದರು.

" ಏನು ಶೀಲಾ? ಕೈಯಲ್ಲೇನೋ ಪತ್ರ ಹಿಡಕೊಂಡು ಮೈ-ಮರೆತು ಬಿಟ್ಟದ್ದೀ? "

" ತಂದೆಯವರ ಪತ್ರ ಇದು " ಶೀಲೆ ಮುಖದ ಮೇಲೆ ನಗು ತರಿಸುತ್ತ ಹೇಳಿದಳು " ನಾನು ಪರೀಕ್ಷೆಯಲ್ಲಿ ಪಾಸಂತೆ. ಅಪ್ಪ ಹಾಗೆ ಬರೆದಿದ್ದಾರೆ! "

" ಹಾಂ! ಹಾಗೇನು? ಬಹಳ ಸಂತೋಷ " ಸಂತೋಷದಿಂದ ಅತ್ತೆ ಹೇಳಿದರು " ಏಳೇಳು ಶೀಲೆ! ಊಟ ಬೇಡವೇನು? "

ಊಟ ಮಾಡುವಾಗ ಶೀಲೆಯ ಅತ್ತೆ, ಶೀಲೆಯ ಪರೀಕ್ಷಾ ಫಲಿತಾಂಶದ ವಿಚಾರವನ್ನು ಹೇಳಿದರು. ಅವರ ಮಾತು ಮುಗಿಯುತ್ತಲೇ ಶೀಲೆ ಮುಂದುವರಿಸುತ್ತಾ ಹೇಳಿದಳು.

" ನಾನು ಕಾಲೇಜಿಗೆ ಸೇರಲು ಕೂಡಲೇ ಹೊರಟು ಬರಬೇಕೆಂದ ಬರೆದಿದ್ದಾರೆ.... "

" ಓ! ಅಂದರೆ ಎಂದು ಹೊರಡಬೇಕೆಂದಿರುವಿ? ' ಶೀಲೆಯ ಮಾವ ಕೇಳಿದರು.

" ಮಾವನ ಪ್ರಶ್ನೆಯನ್ನು ಕಿವಿಗೆ ಹಾಕಿಕೊಳ್ಳದೆ, ರಂಗನಾಥ ನೆಡೆಗೆ ಮುಖ ತಿರುಗಿಸುತ್ತ ಶೀಲೆ ಹೇಳಿದಳು

" ನಿಮ್ಮನ್ನೂ ಒಟ್ಟಿಗೆ ಕರೆದುಕೊಂಡು ಬಾ ಎಂದು ಬರೆದಿದ್ದಾರೆ........ "

" ಯಾರನ್ನು? ನನ್ನನ್ನೇ?.... " ಊಟ ಮಾಡುತ್ತ ರಂಗನಾಥನ್ ಉದ್ಗರಿಸಿದನು.

" ಹೌದು. ನೀವು ಬರಲಿಕ್ಕೇಬೇಕು. ನಾ ಎಳೆದುಕೊಂಡು ಹೋಗುವವಳೇ! ಮುಂದಿನ ಭಾನುವಾರ ಹೊರಡೋಣವೇ? " ಹಠ ಹಿಡಿದು ಕೇಳಿದಳು

" ಇಲ್ಲ! ಇಲ್ಲ! ನನಗೆ ಬರಲು ಬಿಡುವಿಲ್ಲ! "

" ಹಾಗಾದರೆ ನಾನೂ ಹೋಗುವದೇ ಇಲ್ಲ! "

“ ಬೇಡ. ಇಲ್ಲಿಯೇ ಇರು! ಯಾರು ನಿನ್ನನ್ನು ಹೋಗು ಎಂದೆನ್ನುತ್ತಾರೆ? ” ರಂಗನಾಥನ್ ನಕ್ಕ. ಶೀಲೆಯ ಮುಖ ಕೆಂಪಾಯಿತು

ಈ ಬಿಕ್ಕಟ್ಟನ್ನು ರಂಗನಾಥನ ತಾಯಿಯೇ ಬಿಡಿಸಿದರು. ಶೀಲೆಯ ಪರವಾಗಿ ವಾದಿಸುತ್ತ ಅವರು ತಮ್ಮ ಮಗನಿಗೆ ಹೇಳಿದರು.

“ ಮತ್ತೆ ನಿನಗಿಲ್ಲಿ ಏನು ಕೆಲಸ ರಂಗ? ಶೀಲೆ ಒಬ್ಬಳೇ ಮದ್ರಾಸಿಗೆ ಹೋಗುವುದು ಸಮಂಜಸವಲ್ಲ. ನೀನೂ ಒಟ್ಟಿಗೆ ಹೋಗು. ಹೊಸದಾಗಿ ಇಂಗ್ಲೆಂಡಿನಿಂದ ಬಂದಿದ್ದೀ. ಒಮ್ಮೆ ಮಾವ ಅತ್ತೆಯರನ್ನು ನೋಡಿ ಬರಬಾರದೇ? ”

“ ಆಯಿತಮ್ಮ! ನೀನು ಹೇಳಿದುದಕ್ಕೆ ಎದುರು ಮಾತುಂಟೇ? ” ರಂಗನಾಥನೆಂದನು

ಶೀಲೆ ಉಬ್ಬಿ ಹೋದಳು. ತುಸು ತಡೆದು ಹೇಳಿದಳು.

“ ಮಾವಾ! ತಂದೆಯವರು ನಿಮಗೊಂದು ಪತ್ರ ಒಂದು ದಿನ ಹಿಂದೆ ಬರೆದಿದ್ದರಂತೆ.... ”

“ ಹಾಂ! ಹೌದು! ಹೌದು!.... ಅವರಿಗೆ ಇನ್ನೊಂದೆರಡು ದಿನಗಳೊಳಗೆ ಉತ್ತರ ಬರೆಯಲಿದ್ದೇನೆ.... ” ತಡವರಿಸುತ್ತ ಅವರು. ರಂಗನಾಥನ್ ಗಂಭೀರವಾಗಿ ತಲೆ ತಗ್ಗಿಸಿದ. ತಾನು ಪತ್ರದ ಮಾತು ಎತ್ತಿದರೆ, ತಂದೆಯವರ ಏನೇನು ಬರೆದಿದ್ದಾರೆ ಎಂದು ಮಾವ ಹೇಳಿಯಾರು ಎಂದು ಶೀಲೆ ಊಹಿಸಿದ್ದಳು. ಆದರೆ ಮಾವ ಆ ವಿಷಯ ಏನೂ ಮಾತನಾಡದೇ ಇದ್ದುದೂ, ರಂಗನಾಥನನ್ನು ನೋಡಿದುದೂ, ಅವನು ತಲೆ ಬಾಗಿದುದೂ ಶೀಲೆಗೆ ವಿಸ್ಮಯವನ್ನುಂಟು ಮಾಡಿತು........

....ಮರುದಿನ ಸಂಜೆ ರಂಗನಾಥನ್ ಶೀಲೆಗೆ ಹೇಳಿದ.

“ ಶೀಲಾ! ಇವತ್ತು ಗೇಟ್-ವೇ-ಓಫ್ ಇಂಡಿಯಾಕ್ಕೆ ಹೋಗುವದೋ? ”

“ ಹೋಗೋಣ! ” ಶೀಲೆ ಉತ್ಸಾಹದಿಂದ ಅಂದಳು.

ಉಪಹಾರ ತೀರಿಸಿ ಕಾರ್ ಹತ್ತಿ ಇಬ್ಬರೂ ಹೋದರು.

ಕಾರನ್ನು ರಸ್ತೆಯ ಬದಿಯಲ್ಲಿ ನಿಲ್ಲಿಸಿ ಇಬ್ಬರೂ ಕೆಳಗಿಳಿದರು. ನಿರ್ಜನ ಪ್ರದೇಶವನ್ನಾರಿಸಿ, ಸಮುದ್ರಕ್ಕೆ ಮುಖ ಮಾಡಿ ಅವರಿಬ್ಬರು ಕುಳಿತರು.

ಮಾತನಾಡುತ್ತ, ಮಾತನಾಡುತ್ತಾ ರಂಗನಾಥನ್ ಕೇಳಿದ.

" ಶೀಲಾ ! ಹಾಗಾದರೆ ಭಾನುವಾರ ನೀನು ಮದರಾಸಿಗೆ ಹೊರಟು ಹೋಗುತ್ತೀ ? "

" ಆಹಾಂ ! ನಾನು ಮಾತ್ರವಲ್ಲ. ನೀವು ಕೂಡ ಬರಬೇಕು " ಶೀಲೆಯಂದಳು.

" ನಾನೇಕೆ ಬರಬೇಕು ? ಸುಮ್ಮನೆ ಈ ಹಠವೇಕೆ ? "

ಆ ಪ್ರಶ್ನೆಯನ್ನು ಉತ್ತರಿಸಲು ಶೀಲೆಗೆ ಕಷ್ಟವೆನಿಸಿತು. ಉತ್ತರ ವೇನೆಂದು ನೆನೆದ ಅವಳ ಮುಖದ ಬಣ್ಣವೇರಿತು ಆದರೂ ಅವನ್ನು ತೋರಗೊಡದೆ ಹೇಳಿದಳು

" ಅಪ್ಪ ಕರಕೊಂಡು ಬರಲಿಕ್ಕೇಬೇಕು ಎಂದು ಬರೆದಿದ್ದಾರೆ "

" ಅವನಿಗೆ ಕೆಲಸವಿದೆಯಂತೆ. ಆದ್ದರಿಂದ ಈಗ ಬರಲು ಬಿಡುವಿಲ್ಲ ವೆಂದು ಹೇಳಿಬಿಡು. ಆಗದೇ ಶೀಲಾ ? " ರಂಗನಾಥನ್ ಕೇಳಿದನು. ಶೀಲೆ ಕಳವಳದಿಂದ ಅವನ ಮುಖವನ್ನು ನೋಡಿದಳು. ತುಂಟ ನಗುವು ಅವನ ಕಣ್ಣುಗಳಲ್ಲಿ ಥಳಥಳಿಸುವುದನ್ನು ಕಂಡು ಶೀಲೆಗೆ ನಾಚಿಕೆಯಾಯಿತು. ಅವಳು ತಲೆ ತಗ್ಗಿಸಿ, ತೋರಿಕೆಯ ನಸು ಮುನಿಸಿನಿಂದ ಅಂದಳು

" ನೀವು ಬಾರದಿದ್ದರೆ ನಾ ಹೋಗುವುದೇ ಇಲ್ಲ ! "

" ಹಾಗಾದರೆ ಇಲ್ಲಿಯೇ ಇರು ! "

ಶೀಲೆ ರಂಗನಾಥನ ಮುಖವನ್ನು ನೋಡಿದಳು. ಅವಳಿಗೆ ನಗು ಬಂತು. ನಗುತ್ತಾ—

" ಇಲ್ಲೇ ಇರುತ್ತೇನೆ " ಅಂದಳು.

ನಗುತ್ತಲೇ ರಂಗನಾಥನ್ ಕೇಳಿದ.

" ಕಾಲೇಜಿಗೆ ಹೋಗಬೇಡವೆ ? "

" ನೀವು ಒಟ್ಟಿಗೆ ಬಾರದಿದ್ದರೆ ನನಗೆ ಕಾಲೇಜೂ ಬೇಡ, ಏನೂ ಬೇಡ ! " ಉದ್ವೇಗದಿಂದ ನುಡಿದಳು ಶೀಲೆ. ಆದರೆ ಮರುಕ್ಷಣ ಆ ಮಾತಿಗಾಗಿ ಎಲ್ಲಿಲ್ಲದ ನಾಚಿಕೆಯಾಯಿತು ಅವಳಿಗೆ.

ರಂಗನಾಥನ್ ಬಾಯಿತುಂಬ ನಕ್ಕ. ನಕ್ಕು ಹೇಳಿದ

" ಏನು, ನಿನ್ನೊಡನೆ ಕಾಲೇಜು ರೂಮಿನೊಳಗೂ ಬರಬೇಕೆ ? "

ಶೀಲೆಯ ಮುಖ ಕೆಂಪು ಕೆಂಪಾಯಿತು. ಆದರೂ ಒಂದು ವಿಧವ ಸುಖೋದ್ವೇಗದಿಂದ ನಗು ಬಾರದೆ ಇರಲಿಲ್ಲ. ನಗುತ್ತ ರಂಗನಾಥನ ಕಣ್ಣುಗಳನ್ನು ಒಂದು ಕ್ಷಣ ನೋಡಿ ತಲೆ ಬಾಗಿದಳು ತಲೆ ಬಾಗಿ ಒಯ್ಯಾರದಿಂದ ಮಧುರವಾಗಿ ಅಂದಳು.

" ಹೌದು ಬರಬೇಕು ! "

ಮುಚ್ಚಂಜೆಯ ನಸು ಕತ್ತಲು ಹಬ್ಬಿತ್ತು ಕಡಲಗಾಳಿ ರಭಸದಿಂದ ಬೀಸುತ್ತ ಅವರಿಬ್ಬರ ತಲೆಗೂದಲೊಡನೆ ಆಟವಾಡುತ್ತಿತ್ತು ಎದುರಿನಲ್ಲಿ ವಿಶಾಲ ಗಾಂಭೀರ್ಯದಿಂದ ಕೂಡಿದ ಸಮುದ್ರ; ಸಮುದ್ರದಾಚೆಯಿಂದ ಹತ್ತಿಯಂತೆ ಬಿಡಿಬಿಡಿಯಾಗಿ ತೆರೆತೆರೆಯಾಗಿ ಆಗಸವನ್ನೆಲ್ಲ ತಬ್ಬಿಕೊಂಡ ಮೋಡಗಳು ಮನ ಸೆಳೆಯುವ ನೋಟವನ್ನು ಬೀರುತಿದ್ದುವು. ಈ ಸೌಂದರ್ಯದ ಸುಧೆಯನ್ನು ನಗುತ್ತಿರುವ ರಂಗನಾಥನ್ ನೋಡಿದ. ಅವನ ನಗುವೇಕೋ ಮಾಯವಾಗಿ, ಗಾಂಭೀರ್ಯವು ಮುಖವನ್ನು ತುಂಬಿತು. ನಾಚಿಕೆಯಿಂದ ಮುಗ್ಧವಾದ ಶೀಲೆ ರಂಗನಾಥನ ಮುಖವನ್ನು ನೋಡಿದಳು. ಅವಳ ದೃಷ್ಟಿಯು, ದಿಗಂತದತ್ತ ಹರಿದ ಅವನ ದೃಷ್ಟಿಯ ಬೆನ್ನು ಹಿಡಿದು ಹೋಯಿತು. ಏನೋ ಒಂದು ತರದ ವಿಲಕ್ಷಣ ಶಾಂತಿ ಅವಳ ಮನವನ್ನೂ ತುಂಬಿ, ಅವಳನ್ನು ಗಂಭೀರಳನ್ನಾಗಿ ಮಾಡಿಸಿತು. ದಿಗಂತವನ್ನು ಕವಿದ ಬಿಳಿ ಮೋಡಗಳನ್ನು ನೋಡುತ್ತಾ ಆಕೆಯೂ ಮೈಮರೆತಳು

" ಶೀಲಾ !.... " ರಂಗನಾಥನ ಕೂಗು ಕೇಳಿ ಶೀಲೆ ಮುಖ ತಿರುಗಿಸಿದಳು. ರಂಗನಾಥನ ಕಣ್ಣುಗಳಲ್ಲಿ ಎಂದೂ ಇಲ್ಲದ ಮಾರ್ದವವನ್ನು ಕಂಡು ಶೀಲೆಗೆ ಅಚ್ಚರಿಯಾಯಿತು ಅವಳು ಕೇಳಿದಳು

" ಎನು ? "

ತುಸು ಹೊತ್ತು ತಲೆ ತಗ್ಗಿಸಿ ಮೌನವಾಗಿ ಕುಳಿತನು ಶೀಲೆಗೆ ಕಳವಳವಾಯಿತು. ಅವಳು ಸಮೀಪ ಸರಿದು ಕಾತರದಿಂದ ಮತ್ತೊಮ್ಮೆ ಕೇಳಿದಳು.

" ಏನು ಕರೆದಿರಿ ? "

ತಲೆಯೆತ್ತಿ ರಂಗನಾಥನ್ ಉದ್ವೇಗದಿಂದ ಅಂದ.

“ ಶೀಲಾ! ನಿನ್ನೆ ನಿನ್ನ ತಂದೆಯ ಪತ್ರ ಬಂದಿದೆ. ಏನೆಂದು ಬರೆದಿದ್ದಾರೆ ಗೊತ್ತೇ?.... ”

“ ಇಲ್ಲವಲ್ಲ! ”

“ ನಮ್ಮಿಬ್ಬರನ್ನು ಗಂಡ-ಹೆಂಡಿರಾಗಿ ಮಾಡುವ ಇಚ್ಛೆ ಅವರಿಗಿದೆ!”

“ ........ ”

“ ಶೀಲಾ! ”

“ ಓ! ”

“ ನನ್ನ ತಂದೆ ‘ ನಿನ್ನ ಆಲೋಚನೆಯೇನು ’ ಎಂದು ನನ್ನೊಡನೆ ಕೇಳಿದರು. ಹೇಳು ಶೀಲಾ! ನೀನು ನನ್ನ ಕೈ ಹಿಡಿಯುವಿಯಾ? ”

“ ........ ”

ಶೀಲೆ ಮಾತನಾಡದುದನ್ನು ಕಂಡು ಕಾತರದಿಂದ ರಂಗನಾಥನ್ ಎದ್ದು ನಿಂತನು. ಎದ್ದು ನಿಂತು ಆರ್ತನಾಗಿ ಕೇಳಿದ.

“ ನಿನ್ನ ಒಪ್ಪಿಗೆಯಿಲ್ಲವೇ ಶೀಲಾ? ”

ಶೀಲೆ ರಂಗನಾಥನ ಮುಖವನ್ನು ನೋಡಿದಳು. ಅವನ ಕಣ್ಣುಗಳು ಅವಳ ಮುಖದ ಮೇಲೆಯೇ ನೆಟ್ಟಿದ್ದುವು. ಶೀಲೆಯ ಕಣ್ಣುಗಳಲ್ಲಿ ಆನಂದ ಭಾಷ್ಪಗಳು ತುಂಬಿ ತುಳುಕಿದುವು. ಸಮೀಪದ ದೀಪದ ನಸು ಬೆಳಕಿನಲ್ಲಿ ಆ ಕಂಬನಿಗಳು, ಫಳಫಳನೆ ಹೊಳೆದು ರಂಗನಾಥನ ಕಣ್ಣಿಗೆ ಬಿದ್ದುವು. ಸುಖದಿಂದ ರಂಗನಾಥನ್ ಶೀಲೆಯನ್ನು ದಿಟ್ಟಿಸಿದ. ಸುಖ ಸಂವೇದನೆಯ ಸ್ವರ್ಗೀಯ ನಸುನಗು ಅವಳ ಅರೆತೆರೆದ ತುಟಿಗಳಲ್ಲಿ ಅರಳಿದುದು ಕಂಡು ರಂಗನಾಥನ್ ಹರ್ಷದಿಂದ ಹಿಗ್ಗಿದನು. ಶೀಲೆ ದೀನಳಾಗಿ ಉಸುರಿದಳು.

“ ನನ್ನನ್ನೇಕೆ ಕೇಳುವಿರಿ? ನಾನು ನಿಮ್ಮವಳೇ ಅಲ್ಲವೇ? ”

---

## ೧೭

ಶೇಖರನ್ನಾಯರ್ ಸಾಂಥೋಮಿನ ತನ್ನ ಅಂಗಡಿಯನ್ನು ಖಾಲಿ ಮಾಡಿ, ಜಾರ್ಜ ಟವುನಿನನಲ್ಲಿ ತನ್ನ ಅಂಗಡಿಯನ್ನು ಹೂಡಿದನು.

ಶಿವನ್ ತನ್ನ ಪೇಡಿಯ ಕೆಲಸಕ್ಕೆ ರಾಜಿನಾಮೆ ಕೊಟ್ಟು, ತನ್ನ ಪೆಟ್ಟಿಗೆ ಸಾಮಾನುಗಳೊಡನೆ ಶೇಖರನ್ನಾಯರ್ ಖಾಲಿ ಮಾಡಿದ ಅಂಗಡಿಯನ್ನು ಪ್ರವೇಶಿಸಿದನು ಅಂಗಡಿಯ ಹಿಂದೆ ಒಂದು ಚಿಕ್ಕ ಕೋಣೆಯಿತ್ತು ಅದೇ ಶಿವನ ಹೊಸ ಮನೆಯಾಯಿತು.

ವ್ಯಾಪಾರ ಭರದಿಂದ ಸಾಗಿತು. ಒಳ್ಳೇ ಸಂಪಾದನೆಯಾಗತೊಡಗಿತು. ಸಮುದ್ರದ ತೀರಕ್ಕೆ ವಿಹಾರಕ್ಕಾಗಿ ಹೋಗುವವರೇ ಅವನ ಗಿರಾಕಿಗಳು. ತಾನು ಬಾಲ್ಯದ ಕೆಲವು ದಿನಗಳನ್ನು ಕಳೆದ ಕೊಂಪೆಯ ಗುಡಿಸಲುಕಾರರೂ ಅವನ ಗಿರಾಕಿಗಳೇ ಈ ಹೊಸ ಬಾಳು ಶಿವನಿಗೆ ಚನ್ನಾಗಿ ಹಿಡಿಸಿತು.

ಒಂದು ದಿನ ಬೆಳಗ್ಗೆ ಶಿವನಂಗಡಿಗೆ ಹಣ್ಣು ಹಣ್ಣು ಮುದುಕನೊಬ್ಬ ಬಂದನು. ಅವನನ್ನು ಕಂಡಕೂಡಲೇ ಶಿವನ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಯಿತು. ಅವನು ಮುನಿಸ್ವಾಮಿ !

" ಒಂದಾಣೆಯ ಬಿ ಡಿ ಕೊಡು " ಮುದುಕನಂದನು.

ಶಿವನ್ ಬೀಡಿ ಕೊಟ್ಟನು

" ಹಣ ಈಗ ಇಲ್ಲ. ಮತ್ತೆ ಕೊಡುತ್ತೇನೆ ' ಮುದುಕ ಹೇಳಿದ.

" ಆದಾಗದು " ಶಿವನ್ " ಒಂದೋ ಹಣ ಕೊಡು ಇಲ್ಲವಾದರೆ ಬೀಡಿ ಹಿಂದೆ ಕೊಡು. ನಾನು ಕಡ ಕೊಡಲಾರೆ ! " ಎಂದ

" ನಾ ಆ ಕೊಂಪೆಯಲ್ಲಿರುವವನು ಕಹಿ ಬೇವಿನ ಮರದ ಪಕ್ಕದಲ್ಲಿ ನನ್ನ ಗುಡಿಸಲು. ನಿನ್ನ ಹಣ ತಿಂದು ನಾ ಎಲ್ಲಿಗೂ ಓಡಿ ಹೋಗಲಾರೆ ! "

" ನಿನ್ನ ಗುಡಿಸಲು ಎಲ್ಲೇ ಇರಲಿ ನಾನು ಕಡ ಕೊಡಲಾರೆ ! ಕಡ ಕೊಟ್ಟರೆ ನೀನು ಹಣ ಹಿಂದೆ ಕೊಡುವ ಮನುಷ್ಯನಲ್ಲವೆಂದು ನನಗೆ ಗೊತ್ತು ! " ಶಿವನಂದನು.

" ಅದು ಹೇಗೆ ಗೊತ್ತು ? ಮುನಿಸ್ವಾಮಿ ಪ್ರಶ್ನಿಸಿದನು. "

" ನನ್ನ ಗುರುತು ಸಿಗಲಿಲ್ಲವೇ, ಮುನಿಸ್ವಾಮಿ, ನಿನಗೆ? " ಶಿವನ್ ಕೇಳಿದ.

ಮುದುಕ ಕಣ್ಣರಳಿಸಿ ತಲೆಯಲ್ಲಾಡಿಸಿದ.

" ನಾನು ಶಿವನ್.... "

" ಶಿವನ್ ! "

ಮುದುಕ ಬೆಚ್ಚಿಬಿದ್ದನು. ಕಣ್ಣು ಬಾಯಿ ಬಿಟ್ಟು ಶಿವನನ್ನೇ ದಿಟ್ಟಿಸಿದನು. ಅವನ ಕೈಕಾಲುಗಳು ನಡುಗಿದುವು.

ಶಿವನ್ ಗಿರಾಕಿಗಳಿಗೆ ಬೇಕಾದ ಸಾಮಾನುಗಳನ್ನು ಕೊಡುವುದರಲ್ಲಿ ಮಗ್ನನಾದನು. ಆ ಕೆಲಸದ ಗಲಿಬಿಲಿಯಲ್ಲಿ ಮುನಿಸ್ವಾಮಿಯ ಪ್ರಕರಣ ಒಂದು ಕ್ಷಣ ಅವನ ಮನಸ್ಸಿನಿಂದ ಮರೆಯಾಯಿತು. ಆಗ ನಡುಗುವ ಒಣಕಲು ಕೈಯೊಂದು ಅವನ ಮುಂದೆ ನಾಲ್ಕಾರು ಬೀಡಿಗಳನ್ನು ಚೆಲ್ಲಿತು.

ಶಿವನ್ ಅತ್ತ ಕಡೆ ನೋಡಿದನು. ಮುದುಕನ ನೆರಿಕಟ್ಟಿದ ಕಳಾಹೀನ ಮುಖದ ಮೇಲೆ ತಿರಸ್ಕಾರದ ರೂಪರೇಖೆಗಳು ಮೂಡಿದ್ದುವು. ಜಿಗುಪ್ಸೆಯ ಧ್ವನಿಯಲ್ಲಿ ಮುನಿಸ್ವಾಮಿ ಕೇಳಿದನು.

" ನಿನ್ನ ಬೀಡಿ ನನಗೆ ಬೇಡ! ತಿಗೋ ಹಿಂದಕ್ಕೆ! "

ಶಿವನ್ ಮಾತಾಡಲಿಲ್ಲ; ಮುನಿಸ್ವಾಮಿ ತಿರಸ್ಕಾರದ ದೃಷ್ಟಿ ಬೀರಿ ಮುಂದೆ ನಡೆದನು. ರಸ್ತೆಯ ಇನ್ನೊಂದು ಪಕ್ಕವನ್ನು ಸೇರಿದನು. ಅವನ ಕಾಲುಗಳು ಗದಗದನೆ ನಡುಗಿರಬೇಕು. ಮನದಲ್ಲೇತರದೋ ಬಿರುಗಾಳಿ ಬೀಸಿರಬೇಕು. ಅಲ್ಲಿಯೇ ದೀಪಸ್ತಂಬಕ್ಕೊರಗಿ ಹುಚ್ಚು ಹಿಡಿದವನಂತೆ " ಯಾರೂ ಅವನ ಅಂಗಡಿಯಲ್ಲಿ ವ್ಯಾಪಾರ ಮಾಡಬೇಡಿರಿ! ಅವನು ನನ್ನನ್ನು ಜೈಲಿಗೆ ಕಳುಹಿಸಿದ ದ್ರೋಹಿ! ಅನಾಥನಾದ ಅವನನ್ನು ನಾ ಸಾಕಿದ್ದೆ! ಅದಕ್ಕುಪಕಾರವಾಗಿ ಅವನು ನನ್ನನ್ನು ಜೈಲಿಗೆ ಕಳುಹಿಸಿದಾ!........ "

ರಸ್ತೆಯ ಜನರೆಲ್ಲ ಗುಂಪುಗೂಡಿದರು. ಕೆಲವು ಜನ ಅವನಂಗಡಿಯ ಎದುರು ನಿಂತು, ಶಿವನೊಡನೆ ಸಂಗತಿಯೇನೆಂದು ವಿಚಾರಿಸಿದರು. ಶಿವನ್ ಪರಿಸ್ಥಿತಿ ವಿಷಮಕ್ಕಿಳಿದು, ಅನ್ಯಥಾ ಗಲಾಟೆಯಾಗಬಾರದೆಂದು ತುಟಿಯೆತ್ತದೆ ಸುಮ್ಮನೆ ಕುಳಿತನು. ಕೆಲವರು ಮುನಿಸ್ವಾಮಿ ಸುತ್ತ ಕೂಡಿದರು.

ಮುನಿಸ್ವಾಮಿ, ತನ್ನ ಬಣ್ಣವನ್ನೆಲ್ಲ ಸೇರಿಸಿ, ಶಿವನನ್ನು ಅಪರಾಧಿಯಂತೆ ಚಿತ್ರಿಸಿದನು. ಇಂದೋ ನಾಳೆಯೋ ಸಾಯುಲಾದಂತಹ ಮುದುಕ; ಉದ್ವೇಗದಿಂದ ಕಂಪಿಸುವ ಅವನ ಸ್ವರ, ಜನರಲ್ಲಿ ಅನುಕಂಪವನ್ನು ಹುಟ್ಟಿಸಿತು. ಶಿವನ ಮೇಲೆ ಅವರಿಗೆ ಸಹಜವಾಗಿ ಸಂಶಯವು ಹುಟ್ಟಿತು. ಇದಕ್ಕೆ ಇಂಬು ಕೊಡುವಂತೆ, ಇದರ ಬಗ್ಗೆ ಯಾರು ಏನು ವಿಚಾರಿಸಿದರೂ, ಶಿವನ್ ಏನೂ ಹೇಳಲಿಲ್ಲ. ನಿಜಕತೆಯನ್ನು ಹೇಳಿ. ಮುದುಕ ಮುನಿಸ್ವಾಮಿಯನ್ನು ಉದ್ರೇಕಿಸುವುದು ಶಿವನಿಗೆ ಬೇಕಾಗಿರಲಿಲ್ಲ.... ಆದರೆ ಶಿವನ ಮೌನವನ್ನು ಜನರು ತಪ್ಪಾಗಿ ತಿಳಿದುಕೊಂಡರು. ಜನರ ದೃಷ್ಟಿಯಲ್ಲಿ ಶಿವನ್ ಅಪರಾಧಿಯಾದನು.

ಈ ಪ್ರಕರಣ ನಡೆದುದು ಶಿವನಿಗೊಂದು ದೊಡ್ಡ ಪೆಟ್ಟು ಬಿದ್ದಂತಾಯಿತು. ಅವನ ವ್ಯಾಪಾರಕ್ಕೆ ಇದರಿಂದ ಧಕ್ಕೆ ತಗಲದಿರಲಿಲ್ಲ. ಸುತ್ತುಮುತ್ತಲಿನ ಜನರು ಇವನ ಮೇಲೆ ಕೆಟ್ಟ ಅಭಿಪ್ರಾಯವನ್ನು ತಳೆದರು. ಇದರ ಮೇಲೆ ಕಲಶವಿಡುವಂತೆ, ಶಿವನ ಅಂಗಡಿಯ ಎದುರೇ ಇದ್ದ ಚಿಕ್ಕ ಮನೆಯೊಂದನ್ನು ಅಂಗಡಿಯಾಗಿ ಪರಿವರ್ತಿಸಿ, ಇನ್ನೊಬ್ಬನು ಅಂಗಡಿ ಹೂಡಿದನು. ಶಿವನಿಗೆ ತಲೆ ಒಡೆದಂತೆಯೇ ಆಯಿತು.

ಈ ಮುದುಕ ತನ್ನ ಜೀವ ತೆಗೆದನು. ಆ ದುಃಸಮಯದಲ್ಲಿ ತಾನು ನಿಜವನ್ನು ಜನರೆದುರು ಹೇಳದಿದ್ದುದಕ್ಕಾಗಿ ಶಿವನೀಗ ಪರಿತಪಿಸಿದನು. ತನ್ನ ದುರದೃಷ್ಟವೆಂದು ಹಳಹಳಿಸಿದನು. ಸಾಕಿದವನೇ ಇರಲಿ, ಯಾರೇ ಇರಲಿ ಅನ್ಯಾಯದ ಜೀವನ ನಡೆಸಿದ್ದರಿಂದ, ಹುಡುಗಿಯೊಬ್ಬಳ ಕೊಲೆಗೆ ಹೋಟುದುದರಿಂದ ತಾನದನ್ನು ಪ್ರತಿಭಟಿಸಿದನು. ಅದಕ್ಕಾಗಿ ಈ ಶಿಕ್ಷೆಯೆ? ಲೋಕಕ್ಕೆ ಒಳ್ಳೆಯದನ್ನು ಬಗೆದು, ಸತ್ಯದ ಹಾದಿ ಹಿಡಿದವನಿಗೆ ಈ ಪರೀಕ್ಷೆಯೇ? ತಾನೇನು ಅನ್ಯಾಯ ಮಾಡಿದ್ದೇನೆ? ತಾನೇನು ಅಪರಾಧ ಎಸಗಿದ್ದೇನೆ?.... ಆದರೆ ವಿಧಿಗೇಕೆ ತನ್ನ ಮೇಲೆ ಕೋಪ?..... ಶಿವನ್ ಕಂಗಾಲಾದನು. ಇಲ್ಲ! ಕೆಲವು ದಿನ ಇದು ಜನರ ನೆನಪಿನಲ್ಲಿರುವುದು. ಅನಂತರ ಮರೆತು ಹೋದೀತು? ಈ ದೊಡ್ಡ ಪಟ್ಟಣದಲ್ಲಿ ಇದೆಲ್ಲ ಎಷ್ಟು ದಿನ ಜನರ ಮನದಲ್ಲಿ ಉಳಿದೀತು?

ಇಷ್ಟರಲ್ಲಿ, ಒಂದು ದಿನ ಒಂದು ಶವವನ್ನು ಕೊಂಪೆಯ ಜನ ಸ್ಮಶಾನಕ್ಕೆ ಸಾಗಿಸುವುದು ಶಿವನಿಗೆ ಕಂಡಿತು. ಶವ ಮುನಿಸ್ವಾಮಿಯದೆಂದು

ಶಿವನಿಗಾರೋ ತಿಳುಹಿಸಿದರು ಪುಣ್ಯಾತ್ಮ. ದ್ವೇಷ ಸಾಧಿಸಿ ತೀರಿಸಿಕೊಂಡ – ಎಂದು ಶಿವನ್ ಸಿಟ್ಟುಸಿರು ಬಿಟ್ಟನು.

ಶಿವನ ಊಹೆ ನಿಜವಾಗಿತ್ತು. ಕೆಲವು ದಿನಗಳ ತನಕ ಸುತ್ತಲಿನ ಜನರು ಅವನನ್ನು ದ್ರೋಹಿ ಎಂದು ದೂರ ಮಾಡಿದರು. ಆದರೆ ಪಟ್ಟಣದಲ್ಲಿ ಇಂತಹ ಅಸಹಕಾರ ಎಷ್ಟು ದಿನ ಬಾಳೀತು? ಸಮುದ್ರ ತೀರದ ವಿಹಾರಿಗಳು, ನಗುಮುಖದ ಯುವಕರು ಶಿವನೆಡೆಗೇ ಬಂದರು. ಶಿವನ ರಥ ಮತ್ತೆ ಸುಗಮವಾಗಿ ಸಾಗಿತು

ಮುಚ್ಚಂಜೆಯಾಗಲು ಶಿವನಿಗೆ ಸಹಾಯ ಮಾಡಲು ಆರ್ಮುಗಂ ಬರುತ್ತಿದ್ದನು. ಸಂಜೆ, ಚೆಟ್ಟಿಯಾರ ಮನೆಯ ಹೂದೋಟದ ಕೆಲಸ ಮುಗಿಸಿದರೆ ರಾತ್ರಿ ಹತ್ತು ಗಂಟೆಯತನಕ ಅವನಿಗೆ ಬಿಡುವು ಆದ್ದರಿಂದ ಬೇಸರ ಕಳೆಯಲು ಅವನು ಶಿವನಿಗೆ ಶರಣು ಹೊಡೆಯುತ್ತಿದ್ದನು! ಶಿವನಿಗೂ ಅವನಿಂದ ಸಹಾಯವೇ ಆಗುತ್ತಿತ್ತು. ಎದುರಿನ ಅಂಗಡಿಯವನ ಠೀವಿ ಒಗ್ಗದೆ, ಅವನಂಗಡಿಗೆ ಬರುವ ಜನರ ಸಂಖ್ಯೆ ಹೆಚ್ಚಾಗಿತ್ತು. ಎಲ್ಲರಿಗೂ ಕ್ಷಿಪ್ರವಾಗಿ ಬೇಕಾದುದನ್ನು ಕೊಡಲು ಅವನಿಂದ ಒಬ್ಬನಿಂದಲೇ ಸಾಧ್ಯವೂ ಆಗುತ್ತಿರಲಿಲ್ಲ, ಚುರುಕು ಬುದ್ಧಿಯ ಆರ್ಮುಗಂನಿಂದ ಅವನಿಗೆ ತುಂಬಾ ಹಿತವೇ ಆಯಿತು. ಮಾತ್ರವಲ್ಲ.... ಚೆಟ್ಟಿಯಾರರ ಮನೆಯ ಆಗು - ಹೋಗುಗಳನ್ನೆಲ್ಲ ಆರ್ಮುಗಂ ವಿವರಿಸಿ ದಿನಾಲೂ ಹೇಳುತ್ತಿದ್ದ. ಎಷ್ಟೆಂದರೂ ತಾನು ಬೆಳೆದ ಮನೆಯಲ್ಲವೇ? ಶಿವನಿಗೆ ಆ ಮನೆಯ ವಿಚಾರ, ಆಳುಕಾಳುಗಳ ವಿಚಾರ ಕೇಳುವುದೆಂದರೆ ಬಹಳ ಇಷ್ಟವಾದ ವಿಷಯವೇ!

ಒಂದು ದಿನ ಸಂಜೆ ಬಂದ ಆರ್ಮುಗಂ ಹೇಳಿದ.

" ಇಂದು ಸುಂದ್ರಮ್ಮನಿಗೆ ಬಿಡುವೇ ಇಲ್ಲ! "

" ಕಾರಣವೇನು? " ಅಚ್ಚರಿಯಿಂದ ಕೇಳಿದನು ಶಿವನ್

" ಮನೆಯಲ್ಲೆಲ್ಲಿಯೂ ಉತ್ಸಾಹವೇ ಉತ್ಸಾಹ! "

" ಏನು ವಿಶೇಷ ಹೇಳಬಾರದೇ? " ಆತುರದಿಂದ ಪ್ರಶ್ನಿಸಿದ ಶಿವನ್.

" ಅಮ್ಮಾವರ ಓಡಾಟವೇ ಓಡಾಟ! " ತುಂಟತನದಿಂದ ಮಾತು ಹಾರಿಸಿದ ಆರ್ಮುಗಂ.

" ಅದೇನು ಹೇಳು ಮಹಾರಾಯಾ, ಒಮ್ಮೆ ! " ಸಹಿಸಲಾರದೆ ಶಿವನ್ ಕೂಗಿದ

" ಶೀಲಮ್ಮ ಬಂದಿದಾರೆ ಮುಂಬಯಿಯಿಂದ ! "

" ಶೀಲಮ್ಮ ?.... !.... "

" ಅವರೊಡನೆ ಇನ್ನೊಬ್ಬರೂ ಬಂದಿದ್ದಾರೆ. "

" ಇನ್ನೊಬ್ಬರು ?.... "

" ಹೌದು. ಅವರ ಭಾವ ! "

ಶೀಲಮ್ಮ ಬಂದಿದ್ದಾರೆ !!

ಶಿವನಿಗೆ ಒಮ್ಮೆಲೆ ಸಿಡಿಲು ಬಡಿದಂತಾಯಿತು ಏಕೋ ಹೊಟ್ಟೆಯಲ್ಲಿ ಎಲ್ಲಿಲ್ಲದ ವಿಚಿತ್ರ ಉರಿಯೆದ್ದಿತು ! ' ಶೀಲಮ್ಮ ಬಂದಿದ್ದಾರೆ ! ಶೀಲೆ ಬಂದಿದಾಳೆ ! '—ಎಂದು ಅವನು ತನ್ನಲ್ಲೇ ಗುಣುಗುಟ್ಟಿಕೊಂಡ. ಆ ಮಾತನ್ನು ಗುಣುಗುಟ್ಟಿಕೊಂಡಂತೆಯೇ, ಅವನೆದೆ ದುಃಖ ಕಳವಳಗಳ ವಿಚಿತ್ರ ಭಾವೋನ್ಮಾದದಲ್ಲಿ ತೇಲಿಹೋಯಿತು. ಏಕೆ ಎಂದು ಶಿವನಿಗೆ ಸ್ಪಷ್ಟವಾಗಿ ತಿಳಿಯಲಿಲ್ಲ. ಅವನ ಕಣ್ಣುಗಳು ತೇವಗೊಂಡುವು. ' ಅಯ್ಯೋ ಶೀಲೆ ಬಂದಿದಾಳೆ ! ' ಶಿವನ ಹೃದಯ ಕೂಗಿಕೊಂಡಿತು ' ಆದರೆ ನಾನು ? ಆದರೆ ನಾ ಅವಳನ್ನು ಕಾಣಬಹುದೇ ? ಮಾತಾಡಬಹುದೇ ? ಅಯ್ಯೋ, ನಾನೇಕೆ ಆ ಮನೆಯನ್ನು ಬಿಟ್ಟು ಈ ಸುಟ್ಟ ಅಂಗಡಿಯನ್ನು ಹಿಡಿದೆನು ?.... "

ಶಿವನ್ ಕೈ ಕೈ ಹಿಸುಕಿಕೊಂಡನು. ಮನದೊಳಗಿನ ಅಪೂರ್ವ ಬೇಗುದಿಯನ್ನು, ಅಸ್ಪಷ್ಟ ನೋವನ್ನು ಆತನು ಸಹಿಸದಾದನು. ಆದರೆ.... ಆದರೆ........

" ಏನಣ್ಣಾ, ಸುಮ್ಮನಾದೆ ? " ಆರ್ಮುಗಂ ಕೇಳಿದನು.

" ಹಾಂ ! ಏನೂ ಇಲ್ಲ..... ಏನೂ ಇಲ್ಲ..... " ಶಿವನ್ ತಡವರಿಸಿದನು. ಮತ್ತೆ ತುಸು ಹೊತ್ತು ಮೌನವಾಗಿದ್ದು ಹೇಳಿದ– " ನನಗೊಮ್ಮೆ ನಿನ್ನ ಕೋಣೆಗೆ ಬರಬೇಕೆಂದಿದೆ, ಆರ್ಮುಗಂ ! ನಾಳೆ ಸಂಜೆ ಬರಲೇ? ನಾಳೆ ಹೇಗೂ ವಾರದ ರಜಾದಿನ !.... "

"ಬಾ ಅಣ್ಣ! ಯಾವಾಗ ಬೇಕಾದರೂ ಬಾ...." ಆರ್ಮುಗಂ ಸಂತಸದಿಂದ ಅಂದನು.

"ಈಗಲೇ ಬರಲೇ?" ಕಾತರನಾಗಿ ಶಿವನ್ ಕೇಳಿದನು.

"ಬಾರಲ್ಲ! ನೀನು ನನ್ನ ಕೋಣೆಗೆ ಅಂದು ಹೋದಂದಿನಿಂದ ಬರಲೇ ಇಲ್ಲ. ರಾತ್ರಿ ನಾವಿಬ್ಬರೂ ಮಾತನಾಡಬಹುದು...."

"ಹೌದು ಗಿರಾಕಿಗಳೂ ಕಡಿಮೆಯಾದರು. ಬಾಗಿಲು ಮುಚ್ಚಿ ಹೋಗೋಣ" ಶಿವನಂದ. ಅಂಗಡಿ ಬಾಗಿಲನ್ನು ಆರ್ಮುಗಂನೇ ಮುಚ್ಚಿದನು. ಮತ್ತು ಅವನ ಹಿಂದೆ ಶಿವನ್ ಹೊರಟೇಬಿಟ್ಟನು. ಅವನ ಮನಸ್ಸಿನಲ್ಲಿ ಎಲ್ಲಿಲ್ಲದ ಕಾತರ, ಕಳವಳ, ಸಂದೇಹಗಳು ಕುಣಿದಾಡುತ್ತಿದ್ದುವು. ಶೀಲೆ ತನ್ನ ಕಿಟಕಿಯ ಬಳಿ ನಿಲ್ಲಬಹುದೇ? ತನ್ನೊಡನೆ ಮಾತಾಡಬಹುದೇ?.... ಅಯ್ಯೋ! ತಾನೇಕೆ ಈ ಸುಟ್ಟ ಅಂಗಡಿಯನ್ನು ತೆರೆದೆನು? ಈ ಬುದ್ಧಿ ತನಗೇಕೆ ಬಂತು?

ಶಿವನ್ ಕಾರ್ ಷೆಡ್ಡಿನ ಪಕ್ಕದ ಕೋಣೆಯನ್ನು ಸೇರಿದನು. ಆರ್ಮುಗಂ ಊಟ ಮಾಡಿ ಬರಲು ಹೊರಟು ಹೋದನು

ಶಿವನ್ ತಲೆಯ ಮೇಲೆ ಕೈಯಿಟ್ಟು ಬೆಂಚ ಮೇಲೆ ಕುಳಿತುಕೊಂಡನು ಕುಳಿತುಕೊಳ್ಳಲೂ ಅವನಿಂದಾಗಲಿಲ್ಲ. ಶೀಲೆಯ ಕೋಣೆಯ ಬೆಳಕು, ಅವನು ಕುಳಿತ ಕೋಣೆಯೆದುರಿಗೆ ಚೆಲ್ಲಿತ್ತು! ಶೀಲೆ ತನ್ನ ಕೋಣೆಯೊಳಗೆ ಕುಳಿತಿದ್ದಿರಬೇಕು! ಆಕೆಗೆ ತನ್ನ ವಿಷಯ ತಿಳಿದಿರಬಹುದೇ?... ತಿಳಿದಿರಲೇಬೇಕು! ...ಓ! ಇಲ್ಲವಾದರೆ ಕಿಟಕಿಯ ಬಳಿ ಬಂದು, 'ಶಿವನ್!' ಎಂದು ತುಂಬು ದನಿಯಿಂದ ಕೂಗುತ್ತಿದ್ದಳಲ್ಲ! ಓಃ! ತಾನೇಕೆ ಈ ಸ್ವರ್ಗಸದೃಶ ಕೋಣೆಯನ್ನು ಬಿಟ್ಟು ಅಂಗಡಿ ಹಿಡಿದೆನು? ತನಗೇಕೆ ಈ ಹುಚ್ಚು ಹಿಡಿಯಿತು! ಅಂಗಡಿ ತೆರೆಯುವ ಮೊದಲು ತಾನು ಶೀಲೆಯೊಡನೆ ಒಂದು ಮಾತು ಕೂಡ ಹೇಳಿಲ್ಲ!.... ಕೇಳಿಲ್ಲ!!

ಶಿವನ್ ಬೆಂಚಿನಿಂದ ಎದ್ದು ಹೊರಬಂದು ನಿಂತನು. ಹೂದೋಟವನ್ನು ಸುಳಿದು ಬಂದನು. ತಂಪಾದ ತಿಳಿಗಾಳಿ ಅವನ ತಲೆಗೂದಲನ್ನು ತೀಡಿತು. ಅವನಿಗೆ ಇಂತಹದೇ ಒಂದು ರಾತ್ರಿಯು ನೆನಪಾಯಿತು.

ಅಂದು, ಪೇದೆಯ ವೇಷವನ್ನು ಧರಿಸಿ ಮನೆಗೆ ಬಂದ ಮೊದಲ ದಿನ. ಇಂತಹ ಅವಮಾನದ ಕೀಳು ವೇಷವನ್ನು ವಿದ್ಯಾವಂತನಾದ ನೀನು

ಹೇಗೆ ಧರಿಸಿಕೊಂಡೆ, ಶಿವನ್ ? ' ಎಂದವಳು ಕಾತರದಿಂದ ಕೇಳಿದುದು. ತಾನು ವ್ಯಗ್ರನಾಗಿ ' ಇಂತಹ ಪ್ರಶ್ನೆಗಳನ್ನು ಕೇಳಿ ನನ್ನ ಹೃದಯವನ್ನು ಇರಿಯಬೇಡ, ಶೀಲಾ ! ಅಂದುದು, ಆ ರಾತ್ರಿ ಪಶ್ಚಾತ್ತಾಪದಿಂದ ತಾನು ಈಗ ನಿಂತ ಜಾಗದಲ್ಲೇ ನಿಂತುದು, ಆಗ ಕಣ್ಣೀರು ಸುರಿಸುತ್ತಾ ಶೀಲೆ ಕಿಟಕಿಯೆಡೆಗೆ ಬಂದು ನಿಂತುದು ಆ ಚಿತ್ರವೆಲ್ಲ ಶಿವನ ಮನದೆದುರು ಒಂದರ ಹಿಂದೊಂದು ತೇಲಿ ಬಂದುವು. ತನಗಾಗಿ ಶೀಲೆ ಎಷ್ಟು ಪರಿತಪಿಸಿದಳು ? ಶೀಲೆ ತನಗಾಗಿ ಎಷ್ಟು ಕಳಕಳಿಸಿದಳು !

ಶಿವನ ನೀರು ತುಂಬಿದ ಕಂಗಳು ಕಿಟಕಿಯೆಡೆಗೆ ಹರಿದುವು ದೈನ್ಯತೆಯಿಂದ ನೋಡಿದನು. ಆದರೆ ಶೀಲೆಯೆಲ್ಲಿ ? ಶೀಲೆಯು ಅಲ್ಲಿಲ್ಲ ! ಶೀಲೆಯಿಂದ ಅವನೇ ದೂರ ಹೋಗಿದ್ದಾನೆ. ಐಶ್ವರ್ಯದ ಬಿಸಿಲುಗುದುರೆಯ ಬೆನ್ನು ಹಿಡಿದು, ಅಂಗಡಿಯ ಅರಮನೆಯನ್ನು ಕಟ್ಟಿದ್ದಾನೆ. ಐಶ್ವರ್ಯ... ಏಕೆ ಈ ಐಶ್ವರ್ಯ ?....

ಶಿವನಿಗೆ ದುಃಖವುಕ್ಕಿ ಬಂತು

ಕಿಲಕಿಲನೆ ನಗುವ ಧ್ವನಿ ಕೇಳಿ ಶಿವನ ಬುದ್ಧಿ ಸ್ಥಿಮಿತಕ್ಕೆ ಬಂದಿತು. ನೋಡುತ್ತಾನೆ – ಏನನ್ನು ? ಕಿಟಕಿಯ ಬಳಿ ಎರಡು ವ್ಯಕ್ತಿಗಳು ನಿಂತಿದ್ದಾರೆ. ಶೀಲೆ ಮತ್ತು ಇನ್ನು ಯಾರೋ ತರುಣ !.... ಶೀಲೆಯ ಕೈಗಳು ಅವನ ಬಾಹುಗಳನ್ನು ಆಶ್ರಯಿಸಿವೆ. ಅವನ ಕೈಗಳು ಅವಳ ದೇಹವನ್ನು ಬಳಸಿಕೊಂಡಿವೆ. ಇಬ್ಬರ ಮುಖದಲ್ಲೂ ನಗು ಥಳಥಳಿಸುತ್ತದೆ !

ಬೆಂಕಿ ಬಿದ್ದಂತಾಯಿತು ಶಿವನಿಗೆ ! ಕಾಲುಗಳು ಥರಥರನೆ ನಡುಗಿದುವು. ಅವನಲ್ಲಿ ನಿಲ್ಲದಾದ....

ಊಟ ತೀರಿಸಿ ಬರುವಾಗ, ಶಿವನಿಲ್ಲದುದನ್ನು ಕಂಡು ಅರ್ಮುಗಂನಿಗೆ ಆಶ್ಚರ್ಯವಾಯಿತು.

## ೧೮

ಶೀಲಿ ತನ್ನ ತಲೆಗೂದಲನ್ನು ಬಾಚುತ್ತ ಕಿಟಕಿಯೆಡೆಗೆ ಬಂದು ನಿಂತಳು. ಅವಳ ದೃಷ್ಟಿ ಹೂದೋಟವನ್ನೆಲ್ಲ ಸುಳಿದು, ಕಾರ್ ಷೆಡ್ಡಿನ ಪಕ್ಕದ ಕೋಣೆಯೆದುರಿಗೆ ಹರಿಯಿತು. ಷೆಡ್ಡಿನಾಚೆಯ ಕೋಣೆಯು ಇದ್ದರೂ ಆರ್ಮುಗಂ ಕುಳಿತಿದ್ದನು. ಶೀಲಿಯ ಕಣ್ಣುಗಳು ಅರಳಿಕೊಂಡುವು. ಮನಸ್ಸು ಮೊದಲಿನ ದಿನ ಸುಂದ್ರಮ್ಮನೊಡನೆ ನಡೆದ ಮಾತುಕತೆಗಳನ್ನು ನೆನಪು ಮಾಡಿಕೊಂಡಿತು. ಶಿವನೆಲ್ಲಿ? ಶಿವನು ತನ್ನನ್ನು ಕಾಣಲು ಒಮ್ಮೆಯಾದರೂ ಬಂದಿಲ್ಲವಲ್ಲ?

ಮುಂಬಯಿಯಿಂದ ಬಂದು, ಮೊದಲ ಬಾರಿಗೆ ಕೋಣೆಯೊಳಗೆ ಪ್ರವೇಶಿಸಿ, ಮುಚ್ಚಿದ ಕದವನ್ನು ತೆರೆದು, ಉತ್ಸಾಹದಿಂದ ಕಾರಿನ ಷೆಡ್ಡಿನಾಚೆ ದೃಷ್ಟಿ ಹಾಯಿಸಿ ಶೀಲಿ ಕೂಗಿದ್ದಳು:—

“ಶಿವನ್!” ಎಂದು

ಆದರೆ ಉತ್ತರವೇನೂ ಬಂದಿರಲಿಲ್ಲ. ಕರೆಗೆ ಓಗೊಡುವ ಧ್ವನಿ ಕೇಳಿರಲಿಲ್ಲ. ಆಗ ಮಧ್ಯಾಂಹದ ಸಮಯ. ಶಿವನ್ ಬ್ಯಾಂಕಿನಿಂದ ಬಂದಿರಲಿಕ್ಕಬೇಕು. ಅವನೆಲ್ಲಿಗೂ ಹೊರಗೆ ಹೋಗುವದಿಲ್ಲ. ಕೋಣೆಯೊಳಗೇ ಇರುತ್ತಿದ್ದನಲ್ಲ? ಈಗೆಲ್ಲಿಗೆ ಹೋದನು? ಎಂದು ಚಿಂತಿಸುತ್ತ ಮತ್ತೊಮ್ಮೆ ಶಿವನನ್ನು ಕೂಗಿದ್ದಳು. ಆದರೆ ಓಗೊಡಲು ಶಿವನೆಲ್ಲಿ? ಶಿವನ್ ಅಂಗಡಿ ಕಾರನಾದುದು ಶೀಲಿಗೆ ತಿಳಿದಿರಲಿಲ್ಲ. ಅವಳಿಗೆಂತು ತಿಳಿಯಬೇಕು? ಶಿವನ್ ತನ್ನ ಕರೆಗೆ ಓಗೊಡದುದನ್ನು ಕಂಡು ಅವಳು ಆರ್ಮುಗಮನನ್ನು ಕರೆದಳು. ಆದರೆ ಅವನು ಶಿವನ ಅಂಗಡಿಗೆ ಹೋದದ್ದೂ ಅವಳಿಗೆ ತಿಳಿದಿರಲಿಲ್ಲ.

ಶೀಲಿಗೆ ಆಶ್ಚರ್ಯವಾಯ್ತು. ಶಿವನ್, ಆರ್ಮುಗಂ ಇಬ್ಬರೂ ಇಲ್ಲವೇ? ಕಡೆಗೆ, ಈ ಮನೆಯನ್ನೇ ಬಿಟ್ಟು ಹೋಗಿರಬಹುದೇ?.... ಆದರೆ ತನಗೆ ತಿಳುಹಿಸದೆ ಶಿವನ್ ಎಲ್ಲಿಗೂ ಹೋಗಲಿಕ್ಕಿಲ್ಲವಲ್ಲ?...... ಶೀಲೆ ಚಿಂತಾಕುಲಳಾದಳು.

ಅದನ್ನು ವಿಚಾರಿಸಲೆಂದೇ ಅವಳು ಅಡುಗೆಮನೆಗೆ ನಡೆದಳು. ಸುಂದ್ರಮ್ಮ ಶೀಲೆಯ ಸಾಕು ತಾಯಿ ಎನ್ನಬಹುದು. ಹುಟ್ಟಿದಾಕ್ಷಣ

ದಿಂದ ಶೀಲೆಯನ್ನು ಲಾಲಿಸಿ ಪಾಲಿಸಿದವಳು, ಸುಂದ್ರಮ್ಮ. ಶೀಲೆಯ ಬೇಕು ಬೇಡಗಳೆಡೆಗೆ ಗಮನವಿಟ್ಟು, ಅವಳನ್ನು ಹೊಟ್ಟೆಯ ಮಗಳಂತೆ ನೋಡಿಕೊಂಡವಳಾಕೆಯೇ. ಆದ್ದರಿಂದ ಶೀಲೆಗೂ ಸುಂದ್ರಮ್ಮಳ ಮೇಲೆ ವಿಶೇಷವಾದ ಅಭಿಮಾನವಿದ್ದಿತು.

ಸುಂದ್ರಮ್ಮ ಅಡುಗೆಮನೆಯಲ್ಲಿ ಕೆಲಸದಲ್ಲಿ ನಿರತಳಾಗಿದ್ದಳು. ಶೀಲೆ ಸಮೀಪ ಬಂದು ನಿಂತುದು ಆಕೆಗೆ ಮೊದಲು ತಿಳಿಯಲಿಲ್ಲ.

" ಸುಂದ್ರಮ್ಮ ! " ಶೀಲೆ ಕರೆದಾಗ ಅವಳು ಬೆಚ್ಚಿ ಬಿದ್ದಳು

" ಓ ! ಶೀಲೆ ? ! ಏನು ವಿಶೇಷ ? " ಸುಂದ್ರಮ್ಮ ವಿಚಾರಿಸಿದಳು.

" ಶಿವನ್ ಕಾಣುವುದಿಲ್ಲವಲ್ಲ ಸುಂದ್ರಮ್ಮ ? "

" ನಿನಗೆ ಗೊತ್ತಿಲ್ಲವೇ, ಶೀಲೆ ? " ಸುಂದ್ರಮ್ಮ ಹೇಳಿದಳು " ಶಿವನ್ ಇಲ್ಲಿಂದ ಬಿಟ್ಟು ಹೊರಟು ಹೋದ.... "

" ಹೊರಟು ಹೋದ ? ! " ಶೀಲೆ ಉದ್ಗರಿಸಿದಳು.

" ಅವನು ಒಳ್ಳೆಯ ಕೆಲಸವನ್ನೇ ಹಿಡಿದ ..... " ಸುಂದ್ರಮ್ಮ ನಕ್ಕಳು. ತೃಪ್ತಿಯಿಂದ. ಮತ್ತೆ ಮುಂದುವರಿಸಿದಳು " ಸಾಂಥೋಮಿನ ಇಗರ್ಜಿಯಾಚೆ ಒಂದು ಚಿಕ್ಕ ಅಂಗಡಿ ತೆರೆದಿದ್ದಾನೆ. ಒಳ್ಳೇ ವ್ಯಾಪಾರ ನಡೆಯುತ್ತದೆ. ಶಿವನ್ ಶ್ರೀಮಂತನಾಗುತ್ತಿದ್ದಾನೆ.... "

ಸಂತಸದಿಂದ ಎದೆ ತುಂಬ ನಕ್ಕು, ಸುಂದ್ರಮ್ಮ ಮತ್ತೆ ಹೇಳಿದಳು. " ಒಂದು ರಾತ್ರಿ ನನ್ನ ಬಳಿ ಬಂದು ಕೇಳಿದ, ಶೀಲೆ !.... ಹೀಗೊಂದು ಅಂಗಡಿ ಖಾಲಿ ಬೀಳುವ ಸಂಭವವಿದೆ; ಅಲ್ಲಿ ತಾನು ಅಂಗಡಿ ತೆರೆಯಲೇ ಎಂದು. ನಿನ್ನ ತಂದೆ ಒಪ್ಪಿಗೆ ಕೊಟ್ಟಾರೇ ? ಕೈ ಹಿಡಿದು ಎತ್ತಿದವರನ್ನು ಬಿಟ್ಟು ಹೋಗುವುದು ನ್ಯಾಯವೇ ಎಂದು ಕಳಕಳಿಸಿದನು. ನಾ ಹೇಳಿದೆ ನಿನ್ನನ್ನು ಕೈ ಹಿಡಿದು ಎತ್ತಿದುದು ಯಾಕೆ, ಶಿವನ್ ? ನೀನು ಒಳ್ಳೆಯವ ನಾಗಬೇಕು, ಎಂದಲ್ಲವೇ ? ಈಗ ನೀನು ಅಂಗಡಿಕಾರನಾಗಿ ಹಣವಂತ ನಾಗುವ ಅದೃಷ್ಟ ಒದಗಿಬಂದಿರುವಾಗ, ಚೆಟ್ಟಿಯಾರರೇನೂ ನಿನ್ನ ದಾರಿ ಯಲ್ಲಿ ಅಡ್ಡ ನಿಲ್ಲಲಿಕ್ಕಿಲ್ಲ. ಅವರೊಡನೆ ಕೇಳು ಎಂದೆ. ನಿನ್ನ ತಂದೆ ಒಪ್ಪಿಗೆ ಕೊಟ್ಟರು, ಹಾಗೇ ಅಂಗಡಿ ತೆರೆದು ಅಲ್ಲಿಯೇ ವಾಸವಾಗಿದ್ದಾನೆ. ಸಂಜೆ ಏನೂ ಕೆಲಸವಿಲ್ಲದಾಗ ನಮ್ಮ ಆರ್ಮುಗಂ ಕೂಡ ಅಲ್ಲಿಗೆ ಹೋಗಿ

ಶಿವನಿಗೆ ಸಹಾಯ ಮಾಡುತ್ತಾನೆ.... " ಸುಂದ್ರಮ್ಮ ತೃಪ್ತಿಯ ನಗು ಸೂಸಿದಳು.

ಶೀಲೆಗೂ ದುಃಖದೊಡನೆ ಸಂತೋಷವಾಯಿತು. ಅಂತೂ ಯೋಗ್ಯವಾದ ಕೆಲಸವನ್ನೇ ಹಿಡಿದನಲ್ಲ! ಅಷ್ಟೇ ಸಾಕು ಅಂತಹ ವಿದ್ಯಾವಂತನು, ಲೋಕದ ಕಣ್ಣಿಗೆ ಕೀಳು ವರ್ಗದವನಾದರೂ, ಮನಸ್ಸಿನ ಸಂಸ್ಕಾರದಿಂದ ಉತ್ತಮ ವರ್ಗಕ್ಕೆ ಸೇರಿದವನು. ಪೇಪೆಯ ಕೆಲಸ ಮಾಡಬೇಕೇ? ಅದಷ್ಟು ಒಳ್ಳೆಯದೇ ಆಯಿತು. ಎಲ್ಲಿದ್ದರೂ ಸರಿ, ಶಿವನ್ ಚೆನ್ನಾಗಿದ್ದರೆ ಸರಿ, ಎಂದೆನಿಸಿ ಸುಖಿಸಿದ್ದಳು ಶೀಲೆ.

ಕಿಟಕಿಯ ಬಳಿ ನಿಂತು ತಲೆ ಬಾಚುವವಳಿಗೆ ಇದನ್ನು ಚಿಂತಿಸಿದಾಗ, ಬಾಲ್ಯದ ಅನೇಕ ರಸನಿಮಿಷಗಳು ಕಣ್ಣೆದುರು ಮೂಡಿ ಬಂದುವು. ಆ ಘೋರ ರಾತ್ರಿ.... ತನ್ನನ್ನು ತಪ್ಪಿಸಿದ ಆ ಬಾಲಕ.... ಹೂದೋಟದಲ್ಲಿ ಕೆಲಸ ಮಾಡಿದ ಶಿವನ್.... ತಾನು ಕಿಟಕಿಯ ಬಳಿ ನಿಂತು ಶಿವನೊಡನೆ ಮಾತನಾಡಿದ ಎಷ್ಟೋ ಸುಖದ ದಿನಗಳು ಅವಳಿಗೆ ಗೋಚರಿಸಿದುವು.

ತಾನೊಮ್ಮೆ ಶಿವನ ಅಂಗಡಿಗೆ ಹೋಗಬೇಕು. ಶಿವನನ್ನು ನೋಡಬೇಕು. ವ್ಯಾಪಾರ ಹೇಗೆ ನಡೆದಿದೆ ಎಂದು ವಿಚಾರಿಸಬೇಕು... ಎಂದು ಶೀಲೆ ಎಣಿಕೆ ಹಾಕಿಕೊಂಡಳು.

ಆಗ 'ಶೀಲಾ' ಎಂಬ ಕರೆ ಅವಳಿಗೆ ತಂದೆಯ ಕೋಣೆಯಿಂದ ಕೇಳಿಸಿತು. ಬಾಚಣಿಕೆಯನ್ನು ಮೇಜಮೇಲಿಟ್ಟು 'ಬಂದೆನಪ್ಪಾ' ಎಂದು ಅವಳು ತಂದೆಯ ಕೋಣೆಗೋಡಿದಳು.

" ಬಾ. ಇಲ್ಲಿ ಕುಳಿತುಕೋ " ಶೀಲೆ ಕೋಣೆಯೊಳಗೆ ಬಂದಾಗ ಚೆಟ್ಟಿಯಾರರು ಅಂದರು.

ಶೀಲೆ, ತಂದೆಯೆದುರು ಕುರ್ಚಿಯಲ್ಲಿ ಕುಳಿತುಕೊಂಡಳು. ಚೆಟ್ಟಿಯಾರರು ಕೇಳಿದರು

" ಶೀಲೆ ! ನೀನು ಕಾಲೇಜಿಗೆ ಸೇರುವುದಿಲ್ಲವೇ ? " ಧ್ವನಿಯಲ್ಲಿ ವ್ಯಂಗ ತುಂಬಿತ್ತು.

ಶೀಲೆಗೆ ಅದರ ಅರಿವಾಗದೆ ಇರಲಿಲ್ಲ. ಅವಳಿಗೆ ನಾಚಿಕೆಯಾಯಿತು. ಏನು ಹೇಳಲೆಂದು ಅವಳಿಗೆ ಗೊತ್ತಾಗಲಿಲ್ಲ.

" ನನಗೆ ಗೊತ್ತಿಲ್ಲ !.... " ತಲೆ ತಗ್ಗಿಸಿ ಹೇಳಿದಳಾಕೆ.

" ನಿನಗೆ ಗೊತ್ತಿಲ್ಲವೆಂದರೆ, ಮತ್ತೆ ಯಾರ ಬಳಿ ನಾ ಕೇಳಬೇಕು ? ನಗುತ್ತ ಚೆಟ್ಟಿಯಾರರು ಕೇಳಿದರು.

ಶೀಲೆಯ ಮುಖ ಕೆಂಪೇರಿತು. ಕಣ್ಣುಗಳ ಗೊಂಬೆ ಚಲಮಲಿಸಿತು. ಕಾಲ ಬೆರಳುಗಳು ನೆಲವನ್ನು ಕೆದಕಿಕೊಂಡುವು.

" ನಿನಗೆ ಬೇಡವಪ್ಪಾ ತಮಾಷೆ ಮಾಡೋದು ! " ನಸು ಮುನಿಸಿನಿಂದ ಅಂದಳವಳು.

" ಅಂದರೆ ಕಾಲೇಜಿಗೆ ಹೋಗಬೇಕೆಂದು ನೀನೇ ಮೊದಲು ಹಠ ಹಿಡಿದವಳು. ಆದರೆ ಈಗ ?.... " ನಗಾಡಿದರು ಶೀಲೆಯ ತಂದೆ.

ಮತ್ತೆ ಗಂಭೀರವಾಗಿಯೇ ಹೇಳಿದರು.

" ಶೀಲಾ, ರಂಗನಾಥನ ತಂದೆ ಬರೆದಿದ್ದಾರೆ, ಇನ್ನು ಹತ್ತು ದಿನಗಳಲ್ಲಿ ಒಂದು ಮುಹೂರ್ತವುಂಟಂತೆ ... ಆ ಮುಹೂರ್ತ ಬಿಟ್ಟರೆ ಮತ್ತೆ ಆರು ತಿಂಗಳುಗಳಿಗೆ ಬೇರೆ ಮುಹೂರ್ತವಿಲ್ಲವಂತೆ. ನಿನ್ನೊಡನೆ ಕೇಳಬೇಕೆಂದು ಕರೆಸಿದೆ. ನಿನ್ನ ಒಪ್ಪಿಗೆಯುಂಟೆ. ರಂಗನಾಥನನ್ನು ಈಗ ಅರ್ಧ ಗಂಟೆಯ ಹಿಂದೆ ಕೇಳಿದೆ. ಅವನಿಗೆ ತಂದೆ ಆಗಲೇ ಪತ್ರ ಬರೆದಿದ್ದಾರೆ ತಾನು ಒಪ್ಪಿಗೆಯಿತ್ತೆನೆಂದು ಹೇಳಿದ.... "

ಶೀಲೆ ಮಾತಾಡಲಿಲ್ಲ. ಅಲ್ಲಿ ನಿಲ್ಲಲೂ ಇಲ್ಲ. ನಾಚಿಕೆ, ಸಂತೋಷ ಆತುರಗಳಿಂದ ಅವಳು ಪುಲಕಿತಳಾದಳು. ಅಲ್ಲಿಂದೆದ್ದು ಸರಸರನೆ ಓಡಿ ಹೋದಳು. ಅವಳ ಕೆಂದುಟಿಗಳ ಮೇಲೆ ಲಾಸ್ಯವಾಡಿದ ಸುಖದ ಮುಗುಳು ನಗುವೇ ಚೆಟ್ಟಿಯಾರರಿಗೆ ಉತ್ತರ ಹೇಳಿತ್ತು. ಅವರು ಚೆನ್ನಾಗಿ ನಕ್ಕರು.

ಶೀಲೆ ಹೂದೋಟಕ್ಕೋಡಿದಳು. ಕೋಣೆಯ ಸಂಕುಚಿತ ಸ್ಥಳದಲ್ಲಿ ಅವಳ ಅರಳಿದ ಮನಸ್ಸು ನಿಲ್ಲುವ ಹಾಗಿರಲಿಲ್ಲ! ಉಲ್ಲಾಸದಿಂದ ಹೂದೋಟದಲ್ಲಿ ಅತ್ತಿತ್ತ ತಿರುಗಿ, ತೋಟದ ಮಧ್ಯದಲ್ಲಿರುವ ಮಂಟಪದೊಳಕ್ಕೆ ಬಂದಳು.

ಪಾಪ ! ಎಲ್ಲಿಲ್ಲದ ಲಜ್ಜೆ ಅವಳನ್ನಾಗ ಆವರಿಸಿತು. ಕಾರಣ ಮಂಟಪದಲ್ಲಿ ವೃತ್ತಪತ್ರವೊಂದನ್ನೋದುತ್ತಾ ರಂಗನಾಥನ್ ಕುಳಿತಿದ್ದನು. ಶೀಲೆ ಬಂದುದು ರಂಗನಾಥನಿಗೆ ತಿಳಿಯಲಿಲ್ಲ. ನಾಚಿಕೆಯಿಂದ ಶೀಲೆಗೆ ಅಲ್ಲಿ ನಿಲ್ಲಲಾಗಲಿಲ್ಲ. ಆದರೆ ಅಲ್ಲಿಂದ ಹೋಗಲೂ ಅವಳ ಮನ

ಪ್ಪೂಪ್ಪಲಿಲ್ಲ. ಅಲ್ಲಿಯೇ ಲತಾಕುಂಜದ ಬಾಗಿಲಿಗೊರಗಿ ತುಂಬುಗಣ್ಣು ಗಳಿಂದ ತನ್ನಿನಿಯನನ್ನು ನೋಡಿದಳು.

ಪತ್ರಿಕೆಯನ್ನು ಮಡಚಿ ರಂಗನಾಥನ್ ತಲೆಯೆತ್ತಿದನು. ಎದುರಿನಲ್ಲಿ ಶೀಲೆ!

" ಶೀಲಾ! ನೀನಿಲ್ಲಿ? ಯಾವಾಗಿನಿಂದ ಹೀಗೆ ನಿಂತುಕೊಂಡಿರುವೆ? " ಕೇಳಿದನವನು.

" ಆವಾಗಿನಿಂದಲೇ! " ಶೀಲೆಯುಂದಳು.

" ಬಾ. ಕುಳಿತುಕೋ " ರಂಗನಾಥನ್ ಸ್ವಾಗತಿಸಿದನು.

" ಇಲ್ಲಿ ಕುಳಿತೇನು ಮಾಡುವುದು? " ಶೀಲೆ ಹೇಳಿದಳು " ತೋಟದಲ್ಲಿ ತುಸು ಹೊತ್ತು ಅಲೆದಾಡಬಾರದೇ? "

" ಊಹೂಂ! ಇಲ್ಲಿ ಬಾ, ಶೀಲೆ, ನಿನ್ನೊಡನೆ ಒಂದು ಮಾತು ಹೇಳಲಿವೆ.... " ರಂಗನಾಥನಂದನು. ' ಆ ಮಾತನ್ನು ಆಗಲೇ ತಂದೆ ಹೇಳಿವರು ' ಎಂದು ಶೀಲೆ ಮನದೊಳಗೇ ನುಡಿದುಕೊಂಡಳು. ಆದರೆ ರಂಗನಾಥನ್ ಬಾಯಿಂದ ಕೇಳಿದರೆ ಉಂಟಾಗುವ ಆನಂದ, ಸುಖ ಬೇರೆಯೇ ಅಲ್ಲವೇ?

ಶೀಲೆ ಮುಂದೆ ಸರಿದು ರಂಗನಾಥನ ಪಕ್ಕದಲ್ಲಿ ಕುಳಿತಳು. ತಲೆ ನೆಗ್ಗಿ, ಲಜ್ಜೆಯಿಂದ ಅರೆಮುಚ್ಚಿದ ಚಂಚಲ ಕಣ್ಣುಗಳಿಂದ ಅವನ ಮುಖವನ್ನು ನೋಡುತ್ತ ಮಧುರವಾಗಿ ಕೇಳಿದಳು.

" ಏನು ಮಾತು? "

" ಇನ್ನು ಹತ್ತು ದಿನಗಳಲ್ಲಿ ನಮ್ಮ ಮದುವೆಯಾಗುವುದು, ಶೀಲಾ! "

ಶೀಲೆ ತಲೆ ತಗ್ಗಿಸಿದಳು.

" ತಲೆ ತಗ್ಗಿಸಬೇಡ ಶೀಲಾ! ಇಲ್ಲಿ ನೋಡು ಇನ್ನು ಹತ್ತು ದಿನಗಳಲ್ಲಿ ನೀನು ನನ್ನ ಪತ್ನಿ. ನಾನು ನಿನ್ನ.... "

" ಸ್ವಾಮಿ! " ಶೀಲೆ ನಾಚಿಕೆಯಿಂದ ಕೂಡಿದ ನಗುವನ್ನು ಬೀರಿದಳು.

ಅಪ್ಸರೆಯ ನಗುವಿನಂತೆ, ವಸಂತಕಾಲದ ವನಶ್ರೀಯ ಬೆಡಗಿನಂತೆ ಶೀಲೆಯು ಅವನಿಗೆ ಕಾಣಿಸಿದಳು.

" ಶೀಲಾ ! " ಎಂದು ಉದ್ಗರಿಸಿದನವನು ತುಂಬಿದ ಹೃದಯದಿಂದ. ಅಷ್ಟರಲ್ಲಿ ಮಂಟಪದ ಸಮೀಪವಾಗಿ ಯಾರೋ ಹೋದಂತೆ ಇಬ್ಬರಿಗೆ ಅನಿಸಿತು. ಶೀಲೆ ಎದ್ದು ಹೊರಬಂದು ಸುತ್ತಲೂ ನೋಡಿದಳು. ಆದರೆ ಯಾರೂ ಅವಳ ದೃಷ್ಟಿಗೆ ಬೀಳಲಿಲ್ಲ.

———

## ೧೯

ಕಿಟಕಿಯ ಬಳಿ ಎರಡು ನಗುವ ವ್ಯಕ್ತಿಗಳನ್ನು ಕಂಡ ಶಿವನ್, ಅಲ್ಲಿ ನಿಲ್ಲಲಾರದೆ ನೇರವಾಗಿ ತನ್ನ ಕೋಣೆಗೋಡಿದನು. ಗೇಟಿನಲ್ಲಿ ಕಿರಣಸಿಂಗ ಕೇಳಿದನು.

" ಏನು ಶಿವನ್ ? ಈಗಷ್ಟೆ ಒಳಗೆ ಹೋದೆ. ಇಷ್ಟು ಬೇಗ ಹಿಂದೆ ಬರುತ್ತೀ ಕಾರಣವೇನು ? "

ಶಿವನ್ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಅಂತೆಯೇ ಕಿರಣ ಸಿಂಗನೆಡೆಗೆ ಯಾತನೆಯ ದೃಷ್ಟಿಯನ್ನು ಬೀರಿ ಮುಂದೆ ಸಾಗಿದನು ಕೊಂಪೆಯ ಕಹಿ ಬೇವಿನ ಮರದೀಚೆ, ತಾನು ಬಾಲ್ಯದಲ್ಲಿ ಕುಳಿತು ಕೊಳ್ಳುತ್ತಿದ್ದ ಗೋಡೆಯ ಮೇಲೆ, ಕೊಂಪೆಯ ನಾಲ್ಕಾರು ಗುಡಿಸಲು ಕಾರರು ಕುಳಿತು ಬೀಡಿ ಸೇದುತ್ತ ಪಟ್ಟಾಂಗ ಹೊಡೆಯುತಿದ್ದರು. ವರ್ತಕ ಶಿವನನ್ನು ಕಂಡು ಅವರು ಎದ್ದು ನಿಂತು ನಮ್ರತೆಯಿಂದ ವಿಚಾರಿಸಿದರು.

" ಏನು ಸ್ವಾಮಿ, ಇತ್ತಲಾಗಿ ದಯ ಮಾಡಿಸಿದಿರಿ ? "

ಶಿವನಿಗೆ ಅವರ ಪ್ರಶ್ನೆಯೇ ಕೇಳಿಸಲಿಲ್ಲ. ಕೇಳಿಸುವುದಾದರೂ ಎಂತು ? ಅವನೆದೆಯಲ್ಲಿ ಭೀಕರ ಬಿರುಗಾಳಿ ಎದ್ದಿತ್ತು. ಅಯ್ಯೋ, ಶೀಲೆಯನ್ನು ತಾನು ಕಾಣಲಾರೆನಲ್ಲ ! ತಾನು ಆ ಕೋಣೆಯಲ್ಲಿ ವಾಸಿಸಿ ಕೊಂಡಿರುವಾಗ ಅವಳು ಕಿಟಕಿಯ ಬಳಿಗೆ ಬಂದರೆ ' ಶಿವನ್ ! ' ಎಂದು

ಎಷ್ಟು ಮೋಹಕವಾಗಿ ಕೂಗುತಿದ್ದಳು! ಆ ಕರೆಗೆ ತಾನು ಓಗೊಟ್ಟು ಕಿಟಕಿಯ ಸಮೀಪಕ್ಕೆ ಮುಂಬರಿದಾಗ ಎಷ್ಟು ರಸವತ್ತಾದ ಮಾತುಕತೆಗಳು ನಡೆಯುತಿದ್ದುವು! ಮುಂಬಯಿಂದ ಬಂದಕೂಡಲೇ ನಗರದಲ್ಲಿ ನೋಡಿದುದನೆಲ್ಲವನ್ನು ವರ್ಣಿಸಿ ಹೇಳಬೇಕೆಂದು ನಾ ಹೇಳಿದ್ದೆ. ಆದ ಆ ಕೇಳಿಕೆಯನ್ನು ನಾ ನೆನಪಿನಲ್ಲಿಟ್ಟುಕೊಂಡಿದ್ದೆನೇ?....ಆ ಸುಖ ಲೋಕವನ್ನು ಒದ್ದು ಬಿಡುವಷ್ಟು ನಾನೇಕೆ ಮೂರ್ಖನಾದೆ? ಈಗ 'ಶಿವನ್!' ಎಂದು ತನ್ನನ್ನು ಕರೆಯುವವರು ಯಾರಿದ್ದಾರೆ? ಈಗ ತನ್ನೊಡನೆ ಆತ್ಮೀಯತೆಯಿಂದ ಮಾತನಾಡುವ ಹೃದಯ ಯಾವದಿದೆ?....

ಶಿವನ್ ಅಂಗಡಿಯ ಹಿಂಬದಿಯ ತನ್ನ ಕೋಣೆಯನ್ನು ಸೇರಿದನು ಬೆಂಚ ಮೇಲೆ ಆಯಾಸದಿಂದ ಮಲಗಿದನು. ನಿದ್ರೆ ಮಾತ್ರ ಬರಲಿಲ್ಲ. ವಿಚಾರವಾಹಿನಿಯು ಅಡೆತಡೆಯಿಲ್ಲದೆ ಮುಂದೆ ಸಾಗಿತು.

'ಶೀಲೆಗೆ ನನ್ನ ವಿಷಯ ತಿಳಿದಿದೆಯೇ?.... ಕಿಟಕಿಯೆಡೆಗೆ ಬಂದವಳು ನಾನಿದ್ದ ಕೋಣೆಯೆಡೆಗಾದರೂ ದೃಷ್ಟಿ ಬೀರಲಿಲ್ಲವಲ್ಲ! ಅವಳು ನನ್ನನ್ನು ಮರೆತಳೇ? ನಾನು ಪೇದೆಯಾದಾಗ, ಕ್ಲಾರ್ಕನ ಉದ್ಯೋಗ ನನಗೆ ದೊರೆಯಲಿಲ್ಲವೆಂದು ಕಣ್ಣೀರು ಸುರಿಸಿದ ಶೀಲೆ ನನ್ನನ್ನು ಮರೆತಳೇ?.... ಇಲ್ಲ! ಇಲ್ಲ! ಶೀಲೆ ನನ್ನನ್ನು ಮರೆಯಲಾರಳು. ಮರೆಯುವುದಾದರೂ ಹೇಗೆ? ಎಂತಹ ಹುಚ್ಚು ಮನಸ್ಸು ನನ್ನದು? ಪಕ್ಕದಲ್ಲಿ ಇನ್ನೊಬ್ಬರಿದ್ದಾಗ 'ಶಿವನ್!' ಎಂದಾಕೆ ಕೂಗಲುಂಟೇ? ಪಕ್ಕದಲ್ಲಿ ಇನ್ನೊಬ್ಬರು ಮಾತನಾಡುವಾಗ ಅವಳು ನನ್ನ ಕೋಣೆಯತ್ತ ನೋಡಲುಂಟೇ? .... ಆದರೆ........ ಅಯ್ಯೋ, ಆದರೆ........ ಆ ನಗು, ಭುಜದ ಮೇಲೊರಗಿದ ಕೈ.... !....?....?.... ನನ್ನ ಹುಚ್ಚು ಮನಸ್ಸು, ಏನೇನೋ ಕಲ್ಪಿಸಿಕೊಳ್ಳುತ್ತಿದೆ!.... ಇಲ್ಲ! ಶೀಲೆಯನ್ನು ನಾ ನೋಡಲೇಬೇಕು! ಅವಳೊಡನೆ ಮಾತನಾಡಲೇಬೇಕು. ನಾನು ಅಂಗಡಿ ತೆರೆದುದು ಅವಳಿಗೆ ಸಂತೋಷವಾಗದೆ ಇರಲಿಕ್ಕಿಲ್ಲ.... ನಾಳೆ ಅಂಗಡಿಗೆ ವಾರದ ರಜಾದಿನ. ಅವಳನ್ನು ನೋಡಲು ಹೋಗಬೇಕು.... '

ಶಿವನ ಮನಸ್ಸು ಒಂದು ನಿರ್ಧಾರಕ್ಕೆ ಬಂತು. ಅಂತೆಯೇ ರಾತ್ರಿಯನ್ನು ಸುಖಮಯವಾಗಿ ಕಳೆದನು. ಏನೇನೋ ಸುಖಸ್ವಪ್ನಗಳನ್ನು ಕಂಡು ಹರ್ಷಗೊಂಡನು. ತಾನೇಕೆ ಅಷ್ಟು ಉಲ್ಲಸಿತನಾಗಿದ್ದೇನೆ ಎಂದು

ಅವನಿಗೇ ತಿಳಿಯದು. ಹತ್ತಿರದ ಕ್ಷೌರಿಕನ ಅಂಗಡಿಗೆ ಹೋಗಿ, ಅವನ ಸೇವೆಯನ್ನು ಸ್ವೀಕರಿಸಿಕೊಂಡನು. ಮತ್ತೆ ಕೋಣೆಗೆ ಬಂದು ಸ್ನಾನ ತೀರಿಸಿ, ಮಡಿಯಾದ ಬಟ್ಟೆಗಳನ್ನು ಧರಿಸಿಕೊಂಡು ಹೊರಟನು. ಗಂಟೆ ಹನ್ನೊಂದು ಹೊಡೆದಿತ್ತು.

ಗೇಟನಲ್ಲಿ ಕಿರಣಸಿಂಗ ಕೇಳಿದ.

" ಏನು ಪುನಃ ಸವಾರಿ ? ನಿನ್ನೆಯ ಕತೆಯೇನು ? ಮಾತನಾಡಲು ಕೂಡ ಇಲ್ಲ ನನ್ನೊಡನೆ.... "

" ಅಮ್ಮನವರೊಡನೆ ಮಾತನಾಡಲೆಂದು ಅಂಗಡಿ ಬಾಗಿಲು ಕೂಡ ಹಾಕದೆ ಬಂದೆ. ಹಾಗೆ ಅವಸರದಿಂದ ಹಿಂದೆ ಹೋಗಬೇಕಾಯ್ತು.. ಇಂದು ಅಂಗಡಿಗೆ ರಜಾದಿನ. ಹಾಗೆ ಸಾವಕಾಶದಿಂದ ಹೋಗುತಿದ್ದೇನೆ.... "

ಕಿರಣಸಿಂಗನಿಗೆ ಖುಷಿಯಾಯಿತು. ಖ್ಹೊ ಖ್ಹೊ ಎಂದು ಗಟ್ಟಿಯಾಗಿ ನಕ್ಕನು.

ಶಿವನ್ ಗೇಟು ದಾಟಿ ಹೂದೋಟದೊಳಕ್ಕೆ ಕಾಲಿಟ್ಟನು. ತೋಟ ದಾಟಿ ಕಾರ್ ಷೆಡ್ಡಿನ ಪಕ್ಕದ ಕೋಣೆಯಲ್ಲಿ ಅಮ್ಮಗಂನನ್ನು ಮೊದಲು ಕಂಡು, ಮತ್ತೆ ಶೀಲೆಯನ್ನು ಕಾಣಬಹುದೆಂದು ಅವನೆಣಿಸಿದನು.

ಹೂದೋಟವನ್ನು ದಾಟುವಾಗ ಲತಾಮಂಟಪದಲ್ಲಿ ಇಬ್ಬರು ವ್ಯಕ್ತಿಗಳು ಅವನಿಗೆ ಕಾಣಿಸಿದರು; ಶೀಲೆ ಮತ್ತು ರಂಗನಾಥನ್ ! ತೀರ ಹತ್ತಿರ ಹತ್ತಿರವಾಗಿ ಕುಳಿತಿದ್ದಾರೆ. ಇಬ್ಬರ ಮುಖದಲ್ಲೂ ಅನಂತಸುಖದ ಛಾಯೆ ಮೂಡಿದೆ. ಶಿವನ ಕಣ್ಣುಗಳಿಗೆ ಒಂದು ನಿಮಿಷ ಈ ದೃಶ್ಯ ಹೊಳೆಯಿತು. ಏಕೋ ಅವನೆದೆಯನ್ನು ಯಾರೋ ಹಿಸುಕಿದಂತಾಯಿತು. ಅಲ್ಲಿಂದ ಮುಂದೋಡಿ ಬಿಟ್ಟನು. ಮುಂದೋಡಿ ಕಾರ್ ಷೆಡ್ಡಿನ ಸಂದಿನಲ್ಲಿ ಅಡಗಿಕೊಂಡನು. ಅವನಿಗೇನು ಮಾಡಲಿ ಎಂದು ತಿಳಿಯಲಿಲ್ಲ. ಅಲ್ಲಿ ನಿಲ್ಲಲಾರದೆ, ಹಿಂದೆ ರಸ್ತೆಗೋಡಿದರೆ ಎಲ್ಲಿ ಅವರು ತನ್ನನ್ನು ಕಾಣುತ್ತಾರೋ ಎಂದು ನೇರವಾಗಿ ಅಡುಗೆ ಮನೆಯತ್ತ ನಡೆದನು.

" ಏನು ಶಿವನ್ ? ಭಾರೀ ಅಪರೂಪ.... " ಸುಂದ್ರಮ್ಮ ಶಿವನನ್ನು ಸ್ವಾಗತಿಸಿದಳು.

" ನಿಮ್ಮನ್ನೆಲ್ಲ ನೋಡಿಕೊಂಡು ಹೋಗೋಣ ಎಂದು ಬಂದೆ.... " ಪ್ರಯತ್ನಪೂರ್ವಕವಾಗಿ ಗುತ್ತ ಹೇಳಿದ ಶಿವನ್.

" ನಮ್ಮನ್ನೆಲ್ಲ? ...ಅಂದರೆ ಶೀಲೆಯನ್ನೇ ? " ಸುಂದ್ರಮ್ಮ ನಕ್ಕಳು

" ಹೌದು ' ಶಿವನು ತಲೆಯಲ್ಲಾಡಿಸಿದನು.

" ಅವಳು ನಿನ್ನೆ ನಿನ್ನ ವಿಷಯ ಕೇಳಿದಳು. ನಿನ್ನ ವಿಷಯವನ್ನೆಲ್ಲ ತಿಳಿದು ಅವಳಿಗೆ ತುಂಬಾ ಸಂತೋಷವಾಯಿತು.... "

ಶಿವನ ಮುಖ ಅರಳಿತು

" ಎನಗೆ ಗೊತ್ತಿಲ್ಲವೇ ಶಿವನ್ ? ಶೀಲೆಯ ಮದುವೆ ಇನ್ನು ಹತ್ತು ದಿನಗಳಲ್ಲಿ ನಡೆಯುವುದು ... "

" ಶೀಲೆಯ ಮದುವೆ ? ! "

" ಹೌದು; ಅವಳ ಸೋದರಭಾವನೊಡನೆ. ಇನ್ನು ಹತ್ತು ದಿನಗಳಲ್ಲಿ ಒಂದು ಮುಹೂರ್ತವಿದೆಯಂತೆ ... "

ಸುಂದ್ರಮ್ಮ ಏನೇನೋ ಹೇಳಿದಳು ಆದರೆ ಅವಳ ಇತರ ಯಾವ ಮಾತೂ ಶಿವನಿಗೆ ಕೇಳಿಸಲಿಲ್ಲ. ' ಶೀಲೆಗೆ ಮದುವೆ – ಅವಳ ಸೋದರ ಭಾವನೊಡನೆ ' ಎಂಬ ನುಡಿಗಳು ಮಾತ್ರ ಅವನೆದೆಯನ್ನು ಸೇರಿ, ಏಕೋ ಕೋಲಾಹಲವನ್ನೆಬ್ಬಿಸಿದುವು ಶಿವನಿಗೆ ತಲೆ ತಿರುಗಿದಂತಾಯಿತು. ಸುಂದ್ರಮ್ಮನ ಬಡಬಡಿಸುವ ಮಾತುಗಳನ್ನು ಅವನು ಕೇಳದಾದ.

" ಶಿವನ್ ಕೇಳಿಸಿತೋ ಇಲ್ಲವೋ..... ನನ್ನ ಮಗ ವಿಷ್ಣು ಸಿಕ್ಕಿದ್ದಾನೆ.... ಪೋಲೀಸರು ಅವನನ್ನು ಹಿಡಿದು ಮೂರು ತಿಂಗಳು ಜೈಲಿಗೆ ಹಾಕಿದ್ದಾರೆ..... ಹೇಗಾದರಾಗಲಿ. ಒಟ್ಟಾರೆ ಕಾಣಲಿಕ್ಕೆ ಸಿಕ್ಕಿದನಲ್ಲ..... ಅಷ್ಟೇ ಸಾಕು........ " ಎಂದು ಸುಂದ್ರಮ್ಮ ಹೇಳಿದುದೂ ಅವನಿಗೆ ಕೇಳಿಸಲಿಲ್ಲ

ಶಿವನ್ ಅಲ್ಲಿ ನಿಲ್ಲಲೂ ಇಷ್ಟಪಡಲಿಲ್ಲ. ಏಕೋ ಅವನಿಗೆ ತಿಳಿಯದು. ಒಂದು ವಿಲಕ್ಷಣವಾದ ಕಳವಳ, ವೇದನೆಯನ್ನು ಅವನ ಹೃದಯವನ್ನೆಲ್ಲ ತುಂಬಿಕೊಂಡಿತು ತಾನೇಕೆ ಹಾಗೆ ಯಾತನೆ ಪಟ್ಟುಕೊಳ್ಳುತ್ತೇನೆ ಎಂದು ಅವನಿಗೇ ತಿಳಿಯದು.

" ಬರುತ್ತೇನೆ ಸುಂದ್ರಮ್ಮಾ ! " ಎಂದು ಪ್ರಯತ್ನದಿಂದ ನಗುವನ್ನು ತೇಲಿಸಿ ಶಿವನ್ ಅಲ್ಲಿಂದ ಹೊರಟನು

ಕಾವಲುಗಾರ ಕಿರಣಸಿಂಗ ಕೇಳಿದ

"ಏನು ಶಿವನ್? ಇಷ್ಟು ಬೇಗ ಮಾತನಾಡಿ ಮುಗಿಯಿತೇ?"

ಎದೆಗೆ ಚೂರಿ ಇರಿದಂತಾಯಿತು, ಶಿವನಿಗೆ. ಅವನು ಉಸಿರೆತ್ತಲಿಲ್ಲ. ತಲೆಯೆತ್ತಿ ಪ್ರಯತ್ನಿಸಿದವನನ್ನು ನೋಡಲೂ ಕೂಡ ಇಲ್ಲ. ತರೆ ಕೆಳಗೆ ಹಾಕಿ ನೇರವಾಗಿ ತನ್ನ ಕೋಣೆಗೋಡಿದನವನು. ಎದೆಯ ವೀಣೆಯಿಂದ ಒಂದೇ ಶ್ರುತಿ ಮಿಡಿದುಕೊಳ್ಳುತಿತ್ತು.

"ಶೀಲೆಗೆ ಮದುವೆ!"

ಮನಸ್ಸು ಒಂದೇ ಮಂತ್ರವನ್ನು ಜಪಿಸುತ್ತಿತ್ತು.

"ಶೀಲೆಗೆ ಮದುವೆ!"

---

## ೨೦

ಶಿವನ್ ಅಂಗಡಿಯ ಬಾಗಿಲು ಮುಚ್ಚಿ ಹೊರಬಿದ್ದನು. ರಸ್ತೆಯಲ್ಲಿ ಕೆಲವು ಪರಿಚಯದವರು ಕೇಳಿದರು; "ಏನು ಶಿವನ್‌ರವರೇ, ಅಂಗಡಿಬಿಟ್ಟು ದೂರ ಹೊರಟಿರಿ?" – ಎಂದು. ಅವರ ಕುತೂಹಲಭರ ಪ್ರಶ್ನೆಗೆ ಶಿವನ್ ಉತ್ತರ ಕೊಡಲಿಲ್ಲ. ಏಕೆ–ಆ ಪ್ರಶ್ನೆ ಅವನಿಗೆ ಕೇಳಿಸಿದೆಯೋ ಇಲ್ಲವೋ! ಅಂಗಡಿಯ ಬಾಗಿಲು ಮುಚ್ಚಿ ಅವನು ಹೊರಟಿದ್ದಾನೆ. ಮಧ್ಯಾಹ್ನದ ಎರಡು ಗಂಟೆಯ ಸಮಯುವದು. ಬಿಸಿಲು ಮಟಮಟನೆ ಹೊಡೆಯುತಿತ್ತು. ಸಿಮೆಂಟಿನ ರಸ್ತೆ ಕಾದ ಕಾವಲಿಯಂತಿತ್ತು. ಶಿವನ್ ಬರಿಗಾಲಲ್ಲಿ ಹೊರಟಿದ್ದಾನೆ. ಉಟ್ಟ ಬಟ್ಟೆ ಮಲಿನವಾಗಿದೆ. ತಲೆಯುಗೂದಲುಗಳು ವಿಕಾರವಾಗಿ ಕೆದರಿಕೊಂಡಿವೆ. ಮುಖವು ವಿಪರೀತವಾಗಿ ಬಾಡಿಕೊಂಡಿದೆ. ಶಿವನ್, ಸುಡುವ ನೆಲವನ್ನು ತುಳಿಯುತ್ತ ನಡೆಯುತಿದ್ದಾನೆ.

ಮರುದಿನ ಬೆಳಿಗ್ಗೆ ಶೀಲೆಗೆ ಮದುವೆ; ಮುಂಬಯಿಯ ರಂಗನಾಥನ ಕೂಡ.

ಸುಂದ್ರಮ್ಮನ ಬಾಯಿಯಿಂದ ಮದುವೆಯ ಸುದ್ದಿ ಕೇಳಿ ಕೋಣೆ ಗೋಡಿ ಬಂದ ಶಿವನ್ ಎಂಟು ದಿನಗಳನ್ನು ಹೇಗೆ ಕಳೆದನೋ ! ಕೋಣೆ ಗೋಡಿ ಬಂದವನು ಆವನು ಅಂಗಡಿಯ ಹೊರಗೆ ಕಾಲೇ ಇಟ್ಟಿರಲಿಲ್ಲ. ಯಾವ ಕೆಲಸದಲ್ಲೂ ಅವನಿಗೆ ಉತ್ಸಾಹವೇ ಇಲ್ಲ ಒಂಬತ್ತು ದಿನಗಳಲ್ಲಿ ಶಿವನ್ ಗುರುತು ಸಿಗಲಾರದಂತೆ ಎಂಬಂತೆ ಬದಲಿಸಿ ಹೋಗಿದ್ದನು ಇದಕ್ಕೆ ಪುಟವಿಡಲು ಅಂದು ಬೆಳಿಗ್ಗೆ ಶೀಲೆ ಅವನಂಗಡಿಗೇ ಬಂದಿದ್ದಳು.

ಶಿವನ್ ತನ್ನ ಕೆಲಸದಲ್ಲಿ ಮಗ್ನನಾಗಿದ್ದನು. ಅಂಗಡಿಯ ಎದುರು ಹೆಂಗುಸು ಒಬ್ಬಳು ನಿಂತಾಗ, ಅಭ್ಯಾಸ ಬಲದಿಂದ ' ಏನು ಬೇಕು ? ' ಎಂದು ಕೇಳಿದ್ದನು ಆದರೆ ಹೊರಗೆನಿಂತ ಹುಡುಗಿ ಕಿಲಕಿಲನೆ ನಕ್ಕಳು. ನಗು ಕೇಳಿ ಬೇಗಾಗಿ, ಶಿವನ್ ತಲೆಯೆತ್ತಿ ನೋಡಿದನು

" ಶೀಲಾ ! " ಉದ್ಗಾರ ಹೊರಟಿತು ಅವನ ಬಾಯಿಂದ.

" ಹೇಗೆ ನಡೆದಿದೆ ನಿನ್ನ ವ್ಯಾಪಾರ ಶಿವನ್ ? ನಾನು ಬಂದು ಹತ್ತು ದಿನಗಳು ಕಳೆದರೂ ನಿನಗೊಮ್ಮೆ ಮನೆಯ ತನಕ ಬರಲು ಸಮಯವೇ ಸಿಗಲಿಲ್ಲ, ಅಲ್ಲವೇ ?.... " ಶೀಲೆ ನಗಾಡುತ್ತಾ ಕೇಳಿದ್ದಳು.

ಶಿವನ್ ಪ್ರಯತ್ನಪೂರ್ವಕವಾಗಿ ನಗಾಡಿದ್ದನು. ಹೊರತು ಮಾತ ನಾಡಿರಲಿಲ್ಲ.

" ವ್ಯಾಪಾರ ಚೆನ್ನಾಗಿ ನಡೆಯುತ್ತಿದೆಯೆ ? " ಮತ್ತೊಮ್ಮೆ ವಿಚಾರಿ ಸಿದ್ದಳು ಶೀಲೆ.

" ಹುಂ ! " ಹೂಂಗುಟ್ಟಿ ಮತ್ತೆ ಮುಂದುವರಿಸಿದ್ದನು " ಆದರೆ ಈ ಕೆಲಸ ಹಿಡಿಯುವ ಮೊದಲು ನಿನ್ನನ್ನು ವಿಚಾರಿಸಲಿಲ್ಲ.... "

ಆದರಲ್ಲೇನು ? ನೀನೊಳ್ಳೆ ಕೆಲಸ ಹಿಡಿದಿ.... ಪೇದೆಯ ಕೆಲಸ ನಿನಗೆ ಯೋಗ್ಯವಾದುದಲ್ಲ.. ಇದೇ ಒಳ್ಳೇದು. ನನಗಂತೂ ತುಂಬ ಸಂತೋಷ " ಶೀಲೆ ನುಡಿದಳು.

ಶಿವನ ಹೃದಯ ಉಕ್ಕಿ ಬಂತು.

ಶೀಲೆ ಆ ಮಾತು, ಈ ಮಾತು ಆಡಿ ಕಡೆಗೆ ಹೇಳಿದಳು.

" ನಿನಗೆ ಗೊತ್ತಿದೆಯಲ್ಲ ಶಿವನ್ ! ನಾಳೆ ಬೆಳಗ್ಗೆ ನನ್ನ ಮದುವೆ.... ನೀನು ಬರಬೇಕು.... "

ಶೀಲೆಯ ಮುಖ ನಾಚಿಕೆಯಿಂದ ಬಣ್ಣವೇರಿತು.

ಶಿವನ ಮುಖದಲ್ಲಿ ಪ್ರಯತ್ನದ ನಗು ಮೂಡಿತು.

" ಹೂಂ " ಎಂದು ತಲೆಯಲ್ಲಾಡಿಸಿದನವನು.

" ....ನೀನು ಬರಲೇ ಬೇಕು, ಆಂ ?.... "

" ಆದೀತು " ಶಿವನಂದನು.

ಶೀಲೆ ಹೋದಳು.

ಶಿವನೆದೆಯಲ್ಲಿ ಬಿರುಗಾಳಿಯೆದ್ದಿತು. ಅಂಗಡಿಯ ಬಾಗಿಲು ಮುಚ್ಚಿ ಕೋಣೆಯೊಳಗೆ ಕುಳಿತನು. ಮನದೊಳಗೇಕೋ ವೇದನೆ; ಹಾಹಾಕಾರ. ಮಧ್ಯಾಹ್ನ ಊಟ ಕೂಡ ಮಾಡಲಿಲ್ಲ ಏತಕ್ಕೂ ಮನಸ್ಸು ಬಾರದು. ಕೋಣೆಯೊಳಗೆ ಕುಳಿತುಕೊಳ್ಳಲೂ ಅವನಿಂದಾಗಲಿಲ್ಲ. ಬಾಗಿಲಿಕ್ಕಿ ಹೊರಬಿದ್ದನು.

ಸುಡು ಬಿಸಿಲಲ್ಲಿ ಶಿವನ್ ನಡೆದನು. ಬರಿಗಾಲು ಬಿಸಿ ನೆಲದಲ್ಲಿ ಸುಟ್ಟುಕೊಳ್ಳುತಿತ್ತು ಅದರೆಡೆಗೆ ಶಿವನ ಗಮನವಿರಲಿಲ್ಲ. ಆ ಉರಿಗಿಂತಲೂ ತೀಕ್ಷ್ಣವಾದ ಉರಿ ಅವನನ್ನು ದಹಿಸುತಿತ್ತು. ಗೊತ್ತುಗುರಿಯಿಲ್ಲದೆ ನಡೆದನವನು. ಕಾಲು ಒಯ್ದಲ್ಲಿಗೆ, ರಸ್ತೆ ಓಣಿ, ಸಂದು, ಗೊಂದು ಎಲ್ಲಾ ಸುತ್ತಿದನು. ತೀರ ಬಳಲಲು ಆಯಾಸವೆನಿಸಿದಲ್ಲೇ ಒಂದು ತುಸು ಎತ್ತರದ ಕಲ್ಲಮೇಲೆ ಕುಳಿತುಕೊಂಡನು.

' ಈ ವೇದನೆಯೇಕೆ ? ಮನಸ್ಸಿನಲ್ಲಿ ಕಳವಳವೇಕೆ ? ' ಅವನು ತನ್ನನ್ನೇ ಕೇಳಿಕೊಂಡನು ' ಈ ನಿರಾಶೆಯೇಕೆ ? ಈ ಅಸಹ್ಯ ಸಂವೇದನೆಯೇಕೆ ?..... ' ಆಯಾಸಗೊಂಡಿದ್ದರೂ ಶಿವನಿಗೆ ಅಲ್ಲಿ ಕುಳಿತುಕೊಳ್ಳಲಾಗಲಿಲ್ಲ. ಕತ್ತಲಲ್ಲಿ ದಾರಿ ಹುಡುಕುವ ದಾರಿಹೋಕನಂತೆ ಎದ್ದು ನಿಂತು ತಡಕಾಡುತ್ತಾ ಮುಂದುವರಿಸಿದನು. ನಡೆಯುತ್ತಿರುವುದು ರಸ್ತೆಯಲ್ಲೋ. ಬೀದಿಯಲ್ಲೋ, ನೆಲದಲ್ಲೋ ಅಥವಾ ಆಕಾಶದಲ್ಲೋ — ಒಂದೂ ಗೊತ್ತಿರಲಿಲ್ಲ ಅವನಿಗೆ. ದಾರಿಯಲ್ಲಿ ಚಲಿಸುವವನೊಬ್ಬನ ಮೇಲೆ ಢಿಕ್ಕಿ ಹೊಡೆದು ಅವನು ಭುಜ ಹಿಡಿದು ಕುಲುಕಿ ' ಕಣ್ಣು ಕಾಣಿಸುವುದಿಲ್ಲವೇ ನಿನಗೆ ? ' ಎಂದು ಬೈದರೂ ಶಿವನಿಗೆ ಜ್ಞಾನ ಬರಲಿಲ್ಲ. ತಲೆಗೂದಲನ್ನು ಹಿಸುಕಿಕೊಳ್ಳುತ್ತಾ ನಡೆಯುತ್ತಲೇ, ಅವನು ಚಿಂತಿಸು

ತಿದ್ದನು. ‘ ನಾನೆಲ್ಲಿಯೋ ನಿರ್ಗತಿಕ ಬಾಲಕನಾಗಿದ್ದೆನು. ರಾತ್ರಿಯನ್ನು ಕಳೆಯಲು ಬೆಚ್ಚಗಿನ ಜಾಗವನ್ನು ಸೇರಿದೆನು. ಅಲ್ಲಿ ಒಂದು ದಿನ ರಾತ್ರಿ ಈ ಹುಡುಗಿಯ ಭೇಟಿಯಾಯಿತು. ಸಾವಿನ ಬಾಯಿಯಿಂದ ಶೀಲೆಯನ್ನು ತಪ್ಪಿಸಿದುದಾಯಿತು. ನೆನಪಿದೆ! ಚೆನ್ನಾಗಿ ನೆನಪಿದೆ!....ರಾತ್ರಿ.... ಕರಾಳ ರಾತ್ರಿ.... ಆದರೂ ದೀಪಸ್ತಂಭಗಳ ದೀಪಗಳ ಕ್ಷೀಣ ಬೆಳಕಲ್ಲಿ, ಗೋಡೆಯನ್ನೇರಿ ಅವಳನ್ನು ಮೇಲೆಳೆದು ರಸ್ತೆಗೆ ಹಾರಿದುದು.... ಅಯ್ಯೋ ಕಾಲೇ ಬಾರದು ಎಂದಾಕೆ ಗಾಬರಿಯಿಂದ ಕಂಗಾಲಾದುದು........ ಅವಳ ಮುಖದಲ್ಲಿನ ಆಗಿನ ಭಾವ, ಕಣ್ಣುಗಳಲ್ಲಿನ ಭಯ ಶಿವನಿಗೆ ಈಗಲೂ ಕಾಣಿಸುತ್ತಿವೆ ಅಲ್ಲಿಂದ ಮನೆಯ ಕೆಲಸದವನಾಗಿ ಸೇರಿಕೊಂಡುದು.... ಅಂದಿನಿಂದ ಶೀಲೆಯೊಡನೆ ಮಾತುಕತೆ ಆರಂಭವಾಯ್ತು. ಹೂದೋಟದಲ್ಲಿ ಏನಾದರೂ ಹರಟೆ ಹೊಡೆಯುತ್ತ, ಅವಳೊಡನೆ ಎಷ್ಟು ಸಮಯ ಸರಸವಾಗಿ ಕಳೆಯಲಿಲ್ಲ! ಕಿಟಕಿಯ ಬಳಿ ನಿಂತು ‘ ಶಿವನ್! ’ ಎಂದು ಎಷ್ಟು ತುಂಬು ದನಿಯಲ್ಲಿ ಕರೆಯುತ್ತಿದ್ದಳು!...... ಶಿವನ್ ಚಿಂತಿಸಿದನು.... ಅವಳಿಂದಾಗಿ ತಾನು ಶಾಲೆಗೆ ಹೋದೆನು; ಕಲಿತೆನು. ಬ್ಯಾಂಕಿನಲ್ಲಿ ಪೇದೆಯ ಕೆಲಸ ಮಾಡಿದೆ! ರಿಕ್ತಾನಾಲನಾದ ತನ್ನನ್ನು ಅವಳೇ ಉದ್ಧರಿಸಿದಳು ಅವಳ ಮಾತುಗಳೇ, ಅವಳ ನಗೆಯೇ. ಅವಳ ಸರಳ ನಡತೆಯೇ ತನ್ನ ಜೀವನಕ್ಕೆ ಒಂದು ರೂಪನ್ನು ಕೊಟ್ಟವು........

ಶಿವನಿಗೆ ವಿಪರೀತ ಆಯಾಸವೆನಿಸಿತು. ನಡೆಯುತ್ತಿದ್ದ ಬೀದಿಯ ಪಕ್ಕದ ಬಾಗಿಲು ಮುಚ್ಚಿದ ಅಂಗಡಿಯ ಮೆಟ್ಟಲು ಕಲ್ಲು ಅವನ ದೃಷ್ಟಿಗೆ ಬಿತ್ತು. ಅಲ್ಲೇ ಹೋಗಿ ಕುಳಿತುಕೊಂಡನು. ಅಂಗೈಗಳಿಂದ ಮುಖವನ್ನು ಮುಚ್ಚಿಕೊಂಡು ಚಿಂತಿಸಿದನು.

‘ ಶೀಲೆಗೆ ಮದುವೆ ! ಶೀಲೆಗೆ ಮದುವೆ !!.... ಆಗಿಕೊಳ್ಳಲಿ! ಸುಖಪಟ್ಟುಕೊಳ್ಳಲಿ ! ಅವಳೇ ತಾನಾಗಿ ಬಂದು ‘ ನನ್ನ ಮದುವೆಗೆ ಬಾ ’ ಎಂದು ಆಮಂತ್ರಿಸಿದ್ದಾಳಲ್ಲ! ಅವಳಿಗೆ ತುಂಬಾ ಆನಂದವಾಗಿರಬೇಕು. ಈ ಮದುವೆ ಅವಳಿಗೆ ಅಪಾರ ಹರ್ಷವನ್ನಿತ್ತಿರಬೇಕು.... ಇರಲಿ! ಅವಳು ಸುಖವಾಗಿ ಇರಲಿ! ತನ್ನ ಬಾಳಿಗೊಂದು ರೂಪವನ್ನು ಕೊಟ್ಟವಳು ಅನಂತ ಸುಖವನ್ನು ಅನುಭೋಗಿಸಲಿ! ’ ಶಿವನ ಮನಸ್ಸು ಸಾರಿ ಹೇಳಿತು. ‘ ಆದರೆ ಈ ಕಳವಳವೇಕೆ? ದುಃಖವೇಕೆ?........ ಅವಳು ಮದುವೆಯಾದರೆ ತಾನೇಕೆ ಸಂಕಟ ಪಟ್ಟುಕೊಳ್ಳಬೇಕು? ತಾನೇಕೆ ಹುಚ್ಚನಂತೆ

ಗೊತ್ತು ಗುರಿಯಿಲ್ಲದೆ ತಿರುಗುತಿದ್ದೇನೆ? ಮದುವೆಯಾಗಲಿ.... ಆದರೆ.... ಆದರೆ........ ''

' ನಿನಗವಳನ್ನು ಮದುವೆಯಾಗಬೇಕೆಂದಿದೆ!' ಯಾರೋ ಹೇಳಿದಂತಾಯಿತು ಶಿವಸಿಗೆ.

' ಇಲ್ಲ! ಹಾಗೆ ಹೇಳಬೇಡ!'

' ನಿನಗೆ, ಶೀಲೆ ನಿನ್ನ ಪತ್ನಿಯಾಗಬೇಕೆಂದಿದೆ!' ಆ ವಾಣಿ ನುಡಿಯಿತು.

' ಅಯ್ಯೋ, ಆ ಆಶೆ ನನಗಿಲ್ಲ!'

' ಆಶೆ ಇದೆ, ಅದನ್ನು ತೋರ್ಪಡಿಸುವ ಧೈರ್ಯ ನಿನಗಿಲ್ಲ!'

' ಇಲ್ಲ! ಇಲ್ಲ!'

' ಇದೆ! ಇದೆ! ನೀನವಳನ್ನು ಪ್ರೀತಿಸುತ್ತೀ!'

' ............ '

' ಅವಳು ಬೇರೆಯವನ ಕೈ ಹಿಡಿಯುತ್ತಾಳೆಂದು ನಿನ್ನ ಹೊಟ್ಟೆಯಲ್ಲಿ ಬೆಂಕಿಯೆದ್ದಿದೆ!'

' ............ '

' ಅವಳ ಕೈ ಹಿಡಿಯುವ ಭಾಗ್ಯ ಇನ್ನೊಬ್ಬನದೆಂದು ನೀನು ಸಂಕಟ ಪಡುತ್ತೀ!'

' ಇಲ್ಲ! ಆ ಸಂಕಟ ನನಗಿಲ್ಲ. ಅವಳನ್ನು ಮದುವೆಯಾಗಲು ನಾನು ಯಾರು?'

' ಬಾಲ್ಯದ ಸಂಗಾತಿ'

' ಸಂಗಾತಿಯೆಂದ ಮಾತ್ರಕ್ಕೆ ಮದುವೆಯಾಗಬೇಕೆಂಬ ಹುಚ್ಚು ನನಗಿಲ್ಲಾ!'

' ನಿನಗಾ ಹುಚ್ಚಿದೆ; ಅವಳ ನಲ್ನುಡಿಗಳನ್ನು ನಗುಮುಖವನ್ನು ನೀನು ಮೋಹಿಸಿದ್ದೀ!'

' ಇಲ್ಲ, ಇಲ್ಲ!.... ಅಯ್ಯೋ, ಅವಳೇಕೆ ನನ್ನೊಡನೆ ನಗುಮುಖದಿಂದ ನಲ್ನುಡಿಗಳನ್ನು ನುಡಿದಳು?'

‘ ತಂಗಿ ಅಣ್ಣನೊಡನೆ ನುಡಿಯುವಂತೆ........ ’

‘ ಅಯ್ಯೋ........ ’

‘ ಅವಳ ನಗುಮುಖ ನಿನ್ನನ್ನು ಹುಚ್ಚು ಕಟ್ಟಿಸಿದೆ! ’

‘ ........... ’

‘ ಅವಳನ್ನು ಮದುವೆಯಾಗಬೇಕೆಂಬ........ ’

‘ ಇಲ್ಲ! ಅದಕ್ಕೆ ನಾನು ಯಾರು?.... ಮದುವೆಯಾಗಲು ನಾನು ಯಾರು? ಅವಳಾರು? ’

‘ ಅದನ್ನೇ ಚಿಂತಿಸು! ’

‘ ನಾನೋ ಕೆಲಸದವನು, ಅವಳೋ ಯಜಮಾನಿತಿ ’

‘ ........... ’

‘ ನಾನೋ ಬಡವ, ಅವಳೋ ಸಿರಿವಂತಳು ’

‘ ಅಂದ ಮೇಲೆ ಅವಳನ್ನು ಮದುವೆಯಾಗುವುದೆಂದರೆ ಹುಚ್ಚೇ ಸರಿ! ’

‘ ಹೌದು! ಓಃ, ಹೌದು! ’

‘ ಹಗಲುಗನಸೇ ಸರಿ! ’

‘ ಹೌದು, ಅಯ್ಯೋ ಹೌದು! ’

‘ ಬಿಸಿಲುಗುದುರೆಯೇ ಸರಿ! ’

‘ ಅಯ್ಯೋ, ನಾನೇಕೆ ಸಂಕಟ ಪಡುವ? ಈ ಕೊಯ್ದಾಟ, ಈ ನರಳಾಟವೇಕೆ? ’

‘ ನೀನೇ ಉತ್ತರ ಹೇಳು ’

‘ ನಾನು ಬಡವ, ಅವಳು ಸಿರಿವಂತಳು. ನಾನು ಕೀಳು, ಅವಳು ಉತ್ತಮ. ನಾನೆಲ್ಲಿ? ಅವಳೆಲ್ಲಿ?.... ಅವಳನ್ನು ಮದುವೆಯಾಗಬೇಕೆಂಬ ಆಶೆಯಿದ್ದರೆ ಅದು ಹುಚ್ಚುತನ, ಅದು ಹಗಲುಗನಸು, ಅದು ಬಿಸಿಲುಗುದುರೆ! ’

‘ ತಿಳಿದೂ, ತಿಳಿದೂ, ಸಂಕಟಪಡಬೇಡ! ’

‘ ಅಯ್ಯೋ........ ’

ತಲೆಗೂದಲನ್ನು ಹಿಸುಕಿಕೊಂಡು ತಲೆಯೆತ್ತಿದನು ಶಿವನ್. ಅವನ ಮುಖ ಅನಂತ ಕಳವಳದ ಛಾಯೆಯನ್ನು ಹೊತ್ತುಕೊಂಡಿತ್ತು. ಸಮಾಧಾನದ, ಶಾಂತಿಯ ರೂಪರೇಖೆಗಳು ಆ ಛಾಯೆಯ ಮೇಲೆ ಮೂಡುವಂತಿತ್ತು.

" ಸ್ವಾಮಿ " ಎಂಬ ದೀನ ಧ್ವನಿ ಕೇಳಿಸಿತವನಿಗೆ.

ಯಾತನೆಯ ದೃಷ್ಟಿಯನ್ನು ಎದುರಿಗೆ ಹರಿಸಿದನು. ಮುಚ್ಚಂಜೆಯ ಮಸುಕು ಬೆಳಕಿನಲ್ಲಿ ಒಂದು ಚಿಕ್ಕ ಮಗು. ಅವನಿಗೆ ತನ್ನ ಕಾಲಬುಡದಲ್ಲಿ ಕಾಣಿಸಿತು. ಹೊಟ್ಟೆ, ಉಬ್ಬರಿಸಿಕೊಂಡಿದೆ; ಕೈಕಾಲುಗಳು ಒಣ ದ ಕೋಲಿನಂತಿವೆ. ಚಿಕ್ಕ ತೆಂಗಿನಕಾಯಿಯಂತಿರುವ ತಲೆ ಎದೆಯ ಗೂಡಿನ ಮೇಲೆ ಹೂತುಕೊಂಡಂತಿದೆ. ದೊಡ್ಡ ದೊಡ್ಡ ಕಣ್ಣುಗಳೆರಡು, ಆರಿ ಹೋಗುವ ದೀಪದಂತೆ ಹೊಳೆಯುತ್ತಿವೆ. ಆ ಮಗುವಿನ ಮುಖದಲ್ಲಿ ಜೀವಕಳೆಯೇ ಇರಲಿಲ್ಲ.

" ಸ್ವಾಮಿ, ಒಂದು ಕಾಸೂ " ಮಗು ಕೈ ನೀಡಿ ಬೇಡಿತು.

ಮಗುವಿನ ದೃಷ್ಟಿಯಲ್ಲಿ ಯಾಚನೆಯ ದೈನ್ಯತೆ ಇರಲಿಲ್ಲ. ಕಾಸು ಬೇಕೆಂಬ ಲವಲವಿಕೆಯಿರಲಿಲ್ಲ. ನಿರ್ಜೀವ ಗೊಂಬೆಯಂತೆ ಅದು ಕೈ ನೀಡಿತ್ತು ಯಾರೋ ಹೇಳಿಕೊಟ್ಟ ಪಾಠವನ್ನೊಪ್ಪಿಸುವಂತೆ ' ಸ್ವಾಮಿ, ಒಂದು ಕಾಸೂ ' ಎಂದು ನುಡಿದಿತ್ತು. ಶಿವನಿಗೆ ಅಯ್ಯೋ ಎನಿಸಿತು ಈ ಮಗುವಿನ್ನು ಎಷ್ಟು ದಿನ ಲೋಕದ ಬೆಳಕನ್ನು ನೋಡಿಕೊಂಡು ಇದ್ದೀತೋ.... ಇವರ ತಲೆಯಮೇಲೆಯೂ ಸಂಪಾದನೆಯ ಭಾರ !

ಶಿವನ ಹೊಟ್ಟೆಯಲ್ಲಿ ಕಸಿವಿಸಿಯಾಯಿತು. ಜೇಬಿಗೆ ಕೈ ಯಿಕ್ಕಿ ಹುಡುಕಾಡಿದನು ಅಲ್ಲಿ ಒಂದು ಚಿಕ್ಕಾಸೂ ಇರಲಿಲ್ಲ.

" ಏನೂ ಇಲ್ಲಪ್ಪಾ, ಹೋಗು " ಎಂದನವನು.

" ಸ್ವಾಮೀ, ಒಂದು ಕಾಸು " ಕೂಸೂ ತನ್ನ ಮಂತ್ರವನ್ನು ಜಪಿಸಿತು.

" ಇಲ್ಲಪ್ಪಾ, ಇಗೋ ನನ್ನ ಜೇಬು ನೋಡು. "

"ಹಸಿವೆಯಾಗುತ್ತದೆ--- ! " ಮಗು ಹೊಟ್ಟೆ ಹೊಟ್ಟೆ ಬಡಿದುಕೊಂಡಿತು.

ಶಿವನಿಗೆ ದುಃಖವುಕ್ಕಿ ಬಂತು. ನಿಸ್ಸಹಾಯತೆಯಿಂದ ಆಚೀಚೆ ನೋಡಿದನು. ಈಗ ಅವನೆದುರು, ಆ ಮಗುವಿನಂತಹ ಹತ್ತಾರು ಮಕ್ಕಳು ಕೂಡಿದ್ದರು ಎಲ್ಲವೂ ಸಾವಿನ ಅಂಗೈಯ ಮೇಲೆ ನಲಿದಾಡುವಂತೆಯೇ ಇದ್ದುವು. ಕಳವಳದಿಂದ ತಾನು ಕುಳಿತ ಬೀದಿಯ ಮೇಲೆಲ್ಲ ದೃಷ್ಟಿಯನ್ನು ಹಾಯಿಸಿದನವನು. ವಿಲಕ್ಷಣವಾದ ಹೊಗೆಯಿಂದ ಕವಿದ ಬೀದಿಯಲ್ಲಿ ಮೊತ್ತಮೊದಲು ಅವನಿಗೇನೂ ಗೋಚರಿಸಲಿಲ್ಲ ಆದರೆ ಹೊಗೆಯೇಳುವ ತಾಣಗಳೆಡೆಗೆ ದೃಷ್ಟಿ ಬೀರಿದಾಗ ಹೊಸ ಲೋಕವೊಂದು ಅವನಿಗೆ ಕಾಣಿಸಿತು ಬೀದಿಯ ಪಕ್ಕದಲ್ಲಿ ಮೂರು ಕಲ್ಲುಗಳನ್ನಿಟ್ಟು ಮಾಡಿದ ಬಡ ಒಲೆಗಳ ಮುಂದೆ ಕುಳಿತ ಅರೆಬತ್ತಲೆ ಸ್ತ್ರೀಯರನೇಕರು ಗೋಚರಿಸಿದರು ಒಲೆಗಳಿಂದ ತುಸು ದೂರದಲ್ಲೇ ತಮ್ಮ ರಿಕ್ಷಾಗಳಿಗೆ ವಿಶ್ರಾಂತಿ ಕೊಟ್ಟು, ಅವುಗಳ ಪಕ್ಕದಲ್ಲಿ ಬೀಡಿ ಸೇದಿಕೊಂಡು ಕುಳಿತ ನರಪೇತರನ್ನು ಕಂಡನು. ಎಲುಬುಗೂಡಿನಂಥ ಮೈ. ಕೆದರಿದ ಕೂದಲಿನ ವಿಕಾರವಾದ ಮುಖ, ಮೈಯನ್ನು ಮುಚ್ಚಿಕೊಳ್ಳಲು ಅಲಕ್ಷ್ಯದಿಂದ ಧರಿಸಿದ ಹರಕು ಸೀರೆಯ ತುಂಡು– ಈ ಮಾನವ ಜೀವಿಗಳನ್ನು ನೋಡಿ ಅವನೆದೆ ಕತಕತನೆ ಕುದಿಯಿತು. ಈ ಬೀದಿ ನಿವಾಸಿಗಳನ್ನು ಶಿವನ್ ದಿನಾಲೂ ಕಂಡಿದ್ದನು. ನಗರದ ಭವ್ಯ ಸೌಂದರ್ಯದ ಹಿನ್ನೆಲೆಯಲ್ಲಡಗಿದ ಈ ಪಟ್ಟಣದ ಜೀವಿಗಳನ್ನು ಅವನು ಸದಾ ನೋಡುತ್ತಿದ್ದ. ನಾಗರಿಕ ಲೋಕದ ಸುಂದರ ಪರದೆಯ ಹಿಂಭಾಗದಲ್ಲಡಗಿದ ಈ ನಿರ್ಭಾಗ್ಯ ನಿಜಲೋಕವನ್ನು ಕಾಣುತಿದ್ದ. ಆದರೆ ಇಂದು ಈ ಲೋಕ ಅವನೆದೆಯನ್ನು ವಿಚಿತ್ರವಾಗಿ ಸ್ಪರ್ಶಿಸಿತು. ಆ ಸಾಯಲಾದ ಬಾಲಕರು, ಆ ಬಡಕಲು ಬತ್ತಲೆ ನಾರಿಯರು, ಬೀಡಿ ಸೇದಿಕೊಂಡು ಬೀದಿಯಲ್ಲಿ ಬಿದ್ದುಕೊಂಡಿರುವ ಆ ನರಪೇತ ಗಂಡುಸರು ಅವನಿಗೆ ಹೊಸ ಅನುಭವವನ್ನು ನೀಡಿದರು; ಹೊಸ ಬೆಳಕನ್ನು ತೋರಿಸಿದರು.

‘ತಾನಾರು?’ ಶಿವನ್ ತನ್ನನ್ನೇ ಪ್ರಶ್ನಿಸಿಕೊಂಡ. ವಿಧಿಯು ತನ್ನ ಮೇಲೆ ಹೆಚ್ಚು ಕರುಣೆದೋರದಿರುತಿದ್ದರೆ ತಾನೂ ಈ ಬಳಗದಲ್ಲಿ ಒಬ್ಬನಾಗಿ ಇರುತ್ತಿದ್ದೆನು. ತನ್ನ ಹುಟ್ಟು ಇಲ್ಲಿ. ತನ್ನ ಲೋಕ ಇದು. ತಾನು ಈ ನೆಲದ ಮಗು..... ಮತ್ತು ತಾನೇಕೆ ಗಗನ ಕುಸುಮಕ್ಕಾಗಿ ಹಾತೊರೆಯಬೇಕು?

ಶಿವನ್ ಚೆನ್ನಾಗಿಯೇ ನಕ್ಕುಬಿಟ್ಟನು ತುಸು ಗಟ್ಟಿಯಾಗಿಯೇ ಮಾತನಾಡಿ ಬಿಟ್ಟನು.

" ಎಂತಹ ಹುಚ್ಚು ನನ್ನದು ? ಎಂತಹ ಹಗಲುಗನಸು ! ನಾನೆಲ್ಲಿ ? ಶೀಲೆಯಲ್ಲಿ ! ಅವಳನ್ನು ಮದುವೆಯಾಗುವುದೇ ?.... ಛಿಃ ! ಛಿಃ !! "

ಶಿವನ್ ತಲೆಯುಲ್ಲಾಡಿಸಿ ನಗಾಡಿದನು. ಎದೆಯ ಭಾರವೆಲ್ಲ ಇಳಿದು ಹೋಯಿತು. ಮನಸ್ಸು ಗಾಳಿಯಂತೆ ಹಗುರವಾಯಿತು

ಇವನ ನಗು ಕೇಳಿ ಬೀದಿಯ ಮಕ್ಕಳೆಲ್ಲರೂ ಇವನ ಸುತ್ತ ಕಲೆತು ಬಿಟ್ಟರು. ಹೆತ್ತವರು ಹೇಳಿಕೊಟ್ಟ ' ಸ್ವಾಮೀ, ಒಂದು ಕಾಸೂ ' ಎಂಬ ಮಂತ್ರವನ್ನು ಕೈ ನೀಡಿ ಜಪಿಸತೊಡಗಿದುವು. ಜೇಬಿನೊಳಗೆ ಹಣವಿರು ತ್ತಿದ್ದರೆ ಅದೆಲ್ಲವನ್ನು ಶಿವನ್ ದಾನ ಮಾಡುತ್ತಿದ್ದನು. ಆದರೆ ಪುಡಿಕಾಸೂ ಇರಲಿಲ್ಲ. ಅಂತೆಯೇ ಅಲ್ಲಿಂದೆದ್ದು ಹೊರಟನು.

ಅವನಿಗೆ ತಾನೆಲ್ಲಿಗೆ ಬಂದಿದ್ದೇನೆ ಎಂದೇ ತಿಳಿದಿರಲಿಲ್ಲ. ಚಿಂತಾಕುಲ ನಾಗಿ ಕಾಲು ಒಯ್ದಲ್ಲಿಗೆ ನಡೆದಿದ್ದನು. ಆದ್ದರಿಂದಲೇ, ಈಗ ತಾನೆಲ್ಲಿ ದ್ದೇನೆ ಎಂದವನು ಹುಡುಕಾಡಬೇಕಾಯಿತು. ಅದೇ ಬೀದಿಯಲ್ಲೇ ಹಿಂದೆ ಬಂದು, ರಾಜರಸ್ತೆಯನ್ನು ಬಂದು ಸೇರಿದನು. ಅದು ಜಾರ್ಜ ಟವುನ್ ಎಂದವನಿಗೆ ಆಗ ತಿಳಿಯಿತಷ್ಟೆ.

ಇದೀಗ ಮನಸ್ಸು ತಿಳಿಯಾದಾಗ ತಾನು ಮಧ್ಯಾಹ್ನದ ಊಟ ತೀರಿಸದುದೂ ನೆನಪಾಯಿತು. ಮೇಲೆ ತಾನಿಷ್ಟು ದೂರ ನಡೆದು ಬಂದಿ ದೇನಲ್ಲ ಎಂದು ಅನಿಸಿತವನಿಗೆ. ಹೊಟ್ಟೆಯಲ್ಲಿ ಹಸಿವಿನ ಉರಿ ಭುಗಿಲೆಂದು ಹತ್ತಿಕೊಂಡಿತು. ಏನು ಮಾಡಲೆಂದು ಅವನಿಗೆ ತಿಳಿಯಲಿಲ್ಲ ಕೈಯಲ್ಲಿ ಕಾಸೂ ಇರಲಿಲ್ಲ. ಇದ್ದರೆ ಹೋಟೆಲಿಗೆ ಹೋಗಬಹುದಾಗಿತ್ತು.

ಆಗ, ಶಿವನಿಗೆ ಶೇಖರನ್ನಾಯರನ ನೆನಪಾಯಿತು. ಅವನ ಅಂಗಡಿ ಅಲ್ಲೇ ಹತ್ತಿರದಲ್ಲಿತ್ತು ಶಿವನ್ ಅಲ್ಲಿಗೆ ನಾಲ್ಕಾರು ಬಾರಿ ಹೋಗಿಯೂ ಇದ್ದನು. ಈಗ ಮತ್ತೊಮ್ಮೆ ಆ ಕಡೆಗೆ ಹೆಜ್ಜೆಯಿಕ್ಕಿದನು

" ಓಹೋ, ಶಿವನ್ ! ಭಾರೀ ಅಪರೂಪ.... ಹೋ, ಏನೀ ವೇಷ?!" ಶೇಖರನ್ನಾಯರ್ ಸ್ವಾಗತಿಸಿದನು.

" ಅದನ್ನೆಲ್ಲ ಮತ್ತೆ ಹೇಳುತ್ತೇನೆ ನಾಯರ್.... ಈಗ ಹಸಿವೆಯಾಗು ತ್ತದೆ " ಶಿವನಂದನು

" ಹೋ! ಅದಕ್ಕೇನು ತೊಂದರೆ ?.... ಬಾ " ಎನ್ನುತ್ತಾ ನಾಯರ್ ಸಮೀಪದ ಹೋಟೆಲಿಗೆ ಕರೆದುಕೊಂಡು ಹೋದನು.

ಶಿವನ್ ಬೇಕಾದುದನ್ನೆಲ್ಲ ತರಿಸಿಕೊಂಡನು. ನಾಯರ್ ಒಂದು ಕಪ್ ಕಾಫಿ ಮಾತ್ರ ತರಿಸಿದನು. ಕಾಫಿ ಹೀರುತ್ತಾ ನಾಯರ್ ಕೇಳಿದನು.

" ಏನಿದು ಕತೆ ಶಿವನ್! ಅಂಗಿಯೆಲ್ಲ ಧೂಳಾಗಿದೆ. ತಲೆಯೆಲ್ಲ ಕೆದರಿಕೊಂಡಿದೆ! "

ತಿಂಡಿ ತಿನ್ನುತ್ತ ಶಿವನ್ ನಕ್ಕು " ಇದೋ ಹೇಳುತ್ತೇನೆ ಕೇಳು.... " ಎನ್ನುತ್ತ ತನ್ನ ಕತೆಯನ್ನೆಲ್ಲ ಹೇಳಿದನು.

ಶೇಖರನ್ನಾಯರ್ ಚನ್ನಾಗಿ ನಗುತ್ತ ದನಿಗೂಡಿಸಿದ.

" ಛೀ! ಛೀ! ಎಂಥಾ ಹುಚ್ಚಿದು ನಿನ್ನದು ಶಿವನ್? ತ.ಸ. ಜೋರಾಗುತ್ತಿದ್ದರೆ ನಿನ್ನನ್ನು ಕಿಲ್ಪಾಕಿನ ಆಸ್ಪತ್ರೆಗೆ ಕಳುಹಿಸಬೇಕಿತ್ತಷ್ಟೆ! "

ಶಿವನ್ ಹೌದೆಂಬಂತೆ ನಗಾಡಿದನು. ನಾಯರ್ ಬಿಲ್ಲಿಗೆ ಹಣ ಕೊಟ್ಟನು. ಇಬ್ಬರೂ ಹೊರಬಂದರು.

" ನಾನಿನ್ನು ಕೋಣೆಗೆ ಹೋಗುತ್ತೇನೆ " ಶಿವನಂದನು.

" ಈಗ ?! ಹೊತ್ತೆಷ್ಟಾಯ್ತು? ಗೊತ್ತಾಗುವುದಿಲ್ಲವೇ ? " ನಾಯರ್ ಹೇಳಿದ.

" ರಾತ್ರಿ ಹತ್ತಾಯಿತು. ಇನ್ನೆಲ್ಲಿ ಬಸ್ಸಿದೆ?.... ರಾತ್ರಿ ಇಲ್ಲಿಯೇ ಇರು. ನಾಳೆ ಹೋಗಬಹುದು.... "

" ಆಹಾಂ!..... ಬೆಳಕು ಹರಿಯುವ ಮೊದಲೇ ಲೀಲೆಗೆ ಮದುವೆ. ಮದುವೆಗೆ ನಾನು ಹೋಗಬೇಕು " ಶಿವನಂದ.

" ಆಯಿತು. ಹಾಗೇ ಆಗಲಿ. ಆದರೆ ತುಸು ಹೊತ್ತು ವಿಶ್ರಾಂತಿ ಪಡಕೊಂಡಾದರೂ ಹೊರಡು. ಮಾತ್ರ ಐದು ಮೈಲು ನಡೆಯಬೇಕಷ್ಟೆ ನೀನು. "

ನಾಯರನ ಸಲಹೆಯಂತೆ ಎರಡು ಗಂಟೆ ಅವನ ಕೋಣೆಯಲ್ಲಿ ಶಿವನ್ ವಿಶ್ರಮಿಸಿಕೊಂಡನು. ಅನಂತರ ಎದ್ದು ಹೊರಟನು.

ಶಿವನ್ ಸಮುದ್ರತೀರದ ರಸ್ತೆಯಲ್ಲಿ ಕಾಲುನಡಿಗೆಯಲ್ಲಿ ಹೊರಟನು. ಪಾದರಸದ ದೀಪಗಳು ಬೆಳದಿಂಗಳನ್ನು ನಾಚಿಸುವ ಪ್ರಕಾಶವನ್ನು ಪಸರಿ

ಸಿದ್ದುವು. ರಸ್ತೆ ನಿರ್ಜನವಾಗಿ ಪ್ರಶಾಂತವಾಗಿತ್ತು. ಸಾಗರದಿಂದ ಶೀತಲ ಗಾಳಿ ಬೀಸುತಿತ್ತು. ಕಡಲ ಭೋರ್ಗರೆಯುವ ಸದ್ದು ಕಿವಿಗಳಿಗೆ ಹೊಡೆಯುತಿತ್ತು. ಆ ನಿರ್ಜನ ರಸ್ತೆಯನ್ನು ಶಿವನ್ ತುಳಿಯತೊಡಗಿದನು.

ರಸ್ತೆಯ ಒಂದು ಪಕ್ಕದಲ್ಲಿ ನೆಟ್ಟ ಹೂಗಿಡಗಳಿಂದ ಹೂಗಳ ಪರಿಮಳವು ಅವನ ಮೂಗಿಗೆ ಮಧುರವಾಗಿ ಬಡಿಯುತ್ತಿತ್ತು. ಆ ಪ್ರಶಾಂತ ರಾತ್ರಿಯಲ್ಲಿ, ಆ ಶೀತಲ ಗಾಳಿಯಲ್ಲಿ, ಆ ಪರಿಮಳದ ಪವಿತ್ರ ರಾಜ್ಯದಲ್ಲಿ ಒಬ್ಬನೇ ಆಗಿ ನಡೆದಾಗ ಶಿವನಿಗೆ ಹಿಂದಿನದೆಲ್ಲ ನೆನಪಿಗೆ ಬಂತು; ನಗು ಬಂತು. ತಾನೆಂಥ ಹುಚ್ಚ ! ತಾನೇಕೆ ಇದನ್ನು ಮೊದಲೇ ತಿಳಿಯದಾದೆ? ಎಂತಹ ಅವಿಚಾರಿ ತಾನು? ಸಂಕಟದಿಂದ ಇಷ್ಟು ದೂರ ನಾಡಾಡಿಯಂತೆ ನಡೆದಾಡಿದೆನಲ್ಲ!— ಎಂದುಕೊಂಡಾಗ ಶಿವನಿಗೆ ನಗಬೇಕೋ, ಅಳಬೇಕೋ ತಿಳಿಯಲಿಲ್ಲ.

ಚಿಂತನೆಯಲ್ಲಿ ಮೈಮರೆತು ನಡೆಯುತ್ತಿದ್ದವನಿಗೆ ಚೀತ್ಕಾರದ ಧ್ವನಿಯೊಂದನ್ನು ಕೇಳಿ ತಟ್ಟನೆ ನಿಲ್ಲುವಂತಾಯಿತು. ಎಡಪಕ್ಕಕ್ಕೆ ಮುಖ ತಿರುಗಿಸಿ ಶಿವನ್ ನೋಡಿದನು. ಕಣ್ಣಿಗೆಟಕುವಷ್ಟು ದೂರಕ್ಕೆ ಮರಳ ರಾಶಿ ಹಬ್ಬಿತ್ತು. ಅದರಾಚೆ ಸಮುದ್ರದ ನೀರ ನೀಲ ಬಣ್ಣ ಆಗಸದ ಬಣ್ಣದೊಡನೆ ಕೂಡಿಕೊಂಡಿತ್ತು. ದೂರದಲ್ಲಿ ಮರಳ ರಾಶಿಯ ಮೇಲೆ ಮೂರು-ನಾಲ್ಕು ವ್ಯಕ್ತಿಗಳ ಆಕಾರವು, ಚಂದಿರನ ನಸು ಬೆಳಕಲ್ಲಿ ಕಾಣಿಸಿತವನಿಗೆ.

"ಅಯ್ಯೋ!...." ಎಂಬ ಚೀತ್ಕಾರದ ಧ್ವನಿ ಮತ್ತೊಮ್ಮೆ ಕೇಳಿಸಿತು. ಮರಳ ಮೇಲೆ ದೂರದಲ್ಲಿ ಕಾಣಿಸುವ ವ್ಯಕ್ತಿಗಳ ದಿಕ್ಕಿನಿಂದ ಚೀತ್ಕಾರ ಕೇಳಿ ಬಂದಿತ್ತು. ಅದೂ ಹೆಣ್ಣಿನ ಧ್ವನಿ! ಏನೋ ಪ್ರಮಾದವು ಸಂಭವಿಸುತ್ತಿದೆಯೆಂದು ಶಿವನಿಗೆ ಅನಿಸಿತು. ರಸ್ತೆಯಲ್ಲೇ ನಿಂತು ಒಂದು ಕ್ಷಣ ಅಲ್ಲಿಗೆ ಹೋಗಬೇಕೋ ಬೇಡವೋ—ಎಂದು ಚಿಂತಿಸಿದನವನು. ಆದರೆ ಅದೋ !

ಇನ್ನೊಮ್ಮೆ ಅದೇ ಪ್ರಬಲವಾದ ಚೀತ್ಕಾರ!

ರಸ್ತೆ ಬಿಟ್ಟು, ಮರಳ ರಾಶಿಯ ಮೇಲೆ ಆ ವ್ಯಕ್ತಿಗಳ ಕಡೆಗೆ ಓಡತೊಡಗಿದನು ಶಿವನ್. ಮರಳಿನಲ್ಲಿ ಓಡುವುದು ಸುಲಭವೇ? ಬಿದ್ದು ಎದ್ದು ತನ್ನಿಂದ ಕೂಡಿದಷ್ಟು ವೇಗದಿಂದ ಶಿವನ್ ಓಡಿದನು. ತೇಕುತ್ತಾ ಆ ವ್ಯಕ್ತಿಗಳ ಸಮೀಪಕ್ಕೆ ಬಂದು, ನೋಡುತ್ತಾನೆ;— ಏನನ್ನು ?

ಇಬ್ಬರು ಜಮ್ಮನಿಗರು. ಒಬ್ಬಳು ತರುಣಿಯನ್ನು ಹಿಡಿದೆಳೆಯುವುದು ಅವನಿಗೆ ಕಾಣಿಸಿತು. ತರುಣಿ ಚೀರಾಡುತ್ತ ತನ್ನೆಲ್ಲ ಶಕ್ತಿಯಿಂದ ಗಂಡಸ ರೊಡನೆ ಉರುಳಾಡುತಿದ್ದಳು. ಅವಳು ಚೀರದಂತೆ ಒಬ್ಬನು ತನ್ನ ಹಸ್ತ ವನ್ನು ಅವಳ ಬಾಯಿಯ ಮೇಲೆ ಒತ್ತಲು ಸರ್ವ ಪ್ರಯತ್ನವನ್ನು ಮಾಡುತಿದ್ದನು. ಶಿವನಿಗೆ ಏನು ಹೊಳೆಯಿತೋ – ಮುಂದೆ ನೆಗೆದು ಆ ಜಮ್ಮನಿಗನ ಮೋರೆಯ ಮೇಲೆ ಬಲವಾಗಿ ಗುದ್ದಿಬಿಟ್ಟನು ಆ ತರುಣ ಮಳಲ ಮೇಲೆ ಬಿದ್ದುಬಿಟ್ಟ. ಅಷ್ಟರಲ್ಲಿ ಹಿಂದಿನಿಂದ ಇನ್ನೊಬ್ಬನು ಶಿವನ ಮೇಲೆ ಬಿದ್ದನು. ಶಿವನ್ ಮರಳ ಮೇಲೆ ಬಿದ್ದುಬಿಟ್ಟ. ಅವನ ಮೇಲೆ, ಮೇಲೇರಿದವನೂ ಬಿದ್ದುಬಿಟ್ಟನು. ಶಿವನ್ ತಟ್ಟನೆ ಪಕ್ಕಕ್ಕೆ ಹೊರಳಿ ಎದ್ದು ನಿಂತು, ತರುಣಿಯನ್ನು ಉದ್ದೇಶಿಸಿ ಹೇಳಿದನು.

" ಇಲ್ಲಿ ಕ್ಷಣವೂ ನಿಲ್ಲಬೇಡ! ಓಡು! ಓಡು! "

ಆದರೆ ತರುಣಿ ಓಡಲಿಲ್ಲ. ಅಲ್ಲಿಯೇ ನಿಂತಳು ಗಾಬರಿಯಿಂದ. ಓಡಲು. ಬಹುಶಃ ಅವಳ ಕಾಲುಗಳಿಗೆ ಶಕ್ತಿಯೇ ಇರಲಿಲ್ಲವೇನೋ!

ಶಿವನ್ ಅವಳ ಕೈ ಹಿಡಿದು, ಮುಂದೆಳೆದು ಬೊಬ್ಬಿಟ್ಟನು " ಬಾ! ಓಡೋಣ! ಕ್ಷಣ ನಿಂತರೆ ಅನಾಹುತವಾದೀತು! " ಇಬ್ಬರೂ ರಸ್ತೆಯತ್ತ ಓಡತೊಡಗಿದರು.

ಅವರು ಎರಡು ಹೆಜ್ಜೆಗಳನ್ನೂ ಮುಂದಿಡಲಿಲ್ಲ. ಆ ಬಿದ್ದ ಇಬ್ಬರು ಎದ್ದು ಬಂದು, ಹಿಂದಿನಿಂದ ಶಿವನ ಮೇಲೆ ಬಿದ್ದರು. ಶಿವನ್ ಕೂಗಿ ಹೇಳಿದ— " ಓಡು! ಜೀವ ಬೇಕಾದರೆ ಓಡು! " ಹುಡುಗಿ ಓಡಿ ಹೋದುದು ಶಿವನಿಗೆ ಕಾಣಿಸಿತು. ಅಷ್ಟರಲ್ಲಿ ಬಲವಾದ ಪೆಟ್ಟೊಂದು ಅವನ ತಲೆಯ ಮೇಲೆ ಬಿದ್ದಂತಾಯಿತು ಅಸಹ್ಯ ನೋವಿನ ಲಹರಿಯೊಂದು ಬೆನ್ನ ಮೂಳೆಯಲ್ಲಿ ಹರಿದು ಹೋದಂತಾಯಿತು. ಅವನ ಕಣ್ಣುಗಳಿಗೆ ಎಲ್ಲವೂ ಮಸುಕು ಮಸುಕಾದಂತಾಯಿತು. ಮರಳ ಮೇಲೆ ಕುಸಿದು ಬಿದ್ದನವನು........

ಎಚ್ಚರವಾಗುವಾಗ ಶಿವನಿಗೆ ತನ್ನ ತಲೆಗೂದಲನ್ನು ಯಾರೋ ಸವರುತಿದ್ದಂತೆ ಅನಿಸಿತು. ಕಣ್ಣು ತೆರೆದು ನೋಡಿದನು. ಬೆಳದಿಂಗಳಲ್ಲಿ ಬೆದರಿದ ಹೆಣ್ಣು ಮುಖವೊಂದು ಅವನಿಗೆ ಕಾಣಿಸಿತು ಶಿವನ್ ತಟ್ಟನೆ ಏಳಲು ಪ್ರಯತ್ನಿಸಿದನು ಆದರೆ, ಆಗದೆ ಅವನ ತಲೆ ಅವಳ ತೊಡೆಯ

ಮೇಲೆ ಹೊರಳಿತು. ಶಿವನ್ ತುಸು ಹೊತ್ತಾದನಂತರ ಕಣ್ಣು ತೆರೆದು ಕೇಳಿದ.

“ ನೀನು ಯಾರು ? ”

“ ನಾನು ?.... ಕನಕಾ ” ಅಂದಳವಳು.

“ ....ಅಂದರೆ ? ”

“ ನೀವು ಪೋಲಿಗಳಿಂದ ನನ್ನನ್ನು ಉಳಿಸಿದಿ.... ”

“ ಓಃ ! ” ಶಿವನಿಗೆ ಎಲ್ಲವೂ ನೆನಪಾಯಿತು.

“ ನೀವು ಓಡಲು ಹೇಳಿದಿ ” ಹುಡುಗಿ ಹೇಳಿದಳು “ ನಾನು ಓಡಿದೆ. ದೂರದಲ್ಲಿ, ಓ ಅಗೋ ಕಾಣಿಸುತ್ತಿವೆಯಲ್ಲ ಆ ದೋಣಿಗಳ ಮಧ್ಯೆ ಅಡಗಿ ಕುಳಿತೆ ಅವರು ನಿಮಗೆ ಹೊಡೆದುದು. ನೀವು ಕೆಳಗೆ ಬಿದ್ದುದು ನನಗೆ ಕಾಣಿಸಿತು.... ”

ಶಿವನ್ ತಲೆಯನ್ನು ಬೆರಳಿನಿಂದ ಸವರಿದನು. ಬೆರಳಿಗೆ ರಕ್ತ ತಾಗಿತು. ರಕ್ತವನ್ನು ನೋಡಿ ‘ ಓ ! ’ ಎಂದು ಉದ್ಗರಿಸಿದನು.

“ ನೋಯುತ್ತದೇನು ? ” ಅವಳು ಕರುಣೆಯಿಂದ ಕೇಳಿದಳು.

ಕಣ್ಣೀರಿನಿಂದ ಒದ್ದೆಯಾಗಿ, ಚಂದಿರನ ಬೆಳಕಿಗೆ ನಕ್ಷತ್ರಗಳೆರಡಂತೆ ಹೊಳೆಯುವ ಕಣ್ಣುಗಳನ್ನು ಶಿವನ್ ನೋಡಿದನು. ನೋಡಿ ತುಂಬಿ ಬಂದ ದನಿಯಲ್ಲಿ ಅಂದ.

“ ಇಲ್ಲ! ”

ಅವಳು ಮುಂದುವರಿಸಿದಳು, ಅವನ ಹಣೆಯನ್ನು ಕೈಯಿಂದ ಸವರುತ್ತಾ– “ ....ನಿಮ್ಮನ್ನು ಹೊಡೆದು ಅವರು ನನಗಾಗಿ ಅತ್ತಲಿತ್ತ ತುಂಬಾ ಸಮಯ ಹುಡುಕಾಡಿದರು. ನಾನು ಕಾಣಸಿಗಲಿಲ್ಲ. ಹಾಗೆಯೇ ಹೊರಟು ಹೋದರವರು.... ಅವರು ಹೋದಮೇಲೆ ನಾನಿಲ್ಲಿಗೆ ಬಂದೆನು. ”

ಶಿವನ್ ಮಾತಾಡಲಿಲ್ಲ. ತಾನು ತರುಣಿಯ ತೊಡೆಯಮೇಲೆ ತಲೆಯಿಟ್ಟು ಮಲಗಿದ್ದೇನೆ ಎಂದವನಿಗೆ ಅರಿವಾದಾಗ ಕಳವಳವಾಯಿತು. ಹಾಗೆಯೇ ಎದ್ದು ಕುಳಿತುಕೊಳ್ಳಲು ಯತ್ನಿಸಿದನು. ಆದರೆ ತಲೆಯೆತ್ತಿದಾಗ, ಪುನಃ ನೋವು ಸಹನೆಯ ಮೇರೆಯನ್ನು ಮೀರಿ ಹೋಯಿತು. “ ಓ.... ಓಹ್.... ” ಎಂದು ನರಳಾಡುತ್ತಾ ಅವಳ ಮೇಲೆ ಬಿದ್ದುಬಿಟ್ಟನು.

ತನ್ನ ಕೈಗಳಿಂದ ಅವನನ್ನು ಕೋಮಲವಾಗಿ ಹಿಡಿದುಕೊಳ್ಳುತ್ತ ಅವಳು ಕಳಕಳಿಯಿಂದ ಕೇಳಿದಳು.

" ಅಯ್ಯೋ. ನೋವಾಗುತ್ತದೆಯೋ?..... ನೀವು ಏಳಲು ಯಾಕೆ ಯತ್ನಿಸಿದಿರಿ ಸುಮ್ಮನೆ?.... "

ಶಿವನ್ ಕಣ್ಣು ರೆಪ್ಪೆಗಳನ್ನು ಮುಚ್ಚಿ ಮೌನವಾಗಿ ಮಲಗಿದನು ಹುಡುಗಿ ಅನುಕಂಪದಿಂದ ಅವನ ತಲೆಗೂದಲನ್ನು ಮೃದುವಾಗಿ ಸವರಿದಳು. ತುಸು ಹೊತ್ತು ಕಳೆದು ಶಿವನ್ ಕಣ್ಣು ತೆರೆದನು.

" ಈಗ ಹೇಗೆನಿಸುತ್ತದೆ? " ಕೇಳಿದಳವಳು.

" ಹೂಂ " ಎಂದನು ಶಿವನ್.

" ಹಾಗಾದರೆ ನಿಮಗೆ ಎದ್ದು ನಿಲ್ಲಲಿಕ್ಕಾಗುತ್ತದೆಯೋ ಪ್ರಯತ್ನಿಸಿರಿ ....... ಆಸ್ಪತ್ರೆಗೆ ಹೋಗೋಣ ....... "

" ಆಸ್ಪತ್ರೆ? ..... ಆಸ್ಪತ್ರೆ ಬೇಡ ..... ಮೊದಲು ನನ್ನ ಕೋಣೆಗೆ ಹೋಗಬೇಕು........ "

" ಆಗಲಿ.... ಏಳಿರಿ.... ನಾನು ನಿಮ್ಮನ್ನು ಹಿಡಕೊಳ್ಳುತ್ತೇನೆ.... " ಅವಳು ಶಿವನ ತಲೆಯಡಿಯಲ್ಲಿ ಕೈಯಿಟ್ಟು ಮೇಲೆತ್ತಿದಳು. ಮರಳ ಮೇಲೆ ಮೊಣಕಾಲೂರಿ ಶಿವನ್ ಎದ್ದು ಕುಳಿತನು ಹುಡುಗಿ ಅವನ ರಟ್ಟೆಯನ್ನು ಹಿಡಿದು, ಶಿವನಿಗೆ ಎದ್ದು ನಿಲ್ಲಲು ಸಹಾಯ ಮಾಡಿದಳು. ಅವನ ಕಾಲುಗಳು ಮರಗಟ್ಟಿ ಹೋಗಿದ್ದುವು. ನಡೆಯಲಾಗಲಿಲ್ಲ. ಅವಳು, ಅವನ ಸೊಂಟದ ಸುತ್ತ ಕೈ ಬಳಸಿ, ಅವನನ್ನು ಮುಂದೆ ನಡೆಯಿಸಿದಳು.

ಶಿವನ್ ತಲೆ ತಿರುಗಿಸಿ ನೋಡಿದನು; ಎಳೇ ತರುಣಿ. ಹದಿನೆಂಟು ವರ್ಷಗಳಾಗಿವೆಯೋ ಏನೋ. ದೇಹವೆಲ್ಲ ತುಂಬಿ ಬಂದಿತ್ತು. ತನ್ನ ಮೈಯನ್ನಾಕೆ ಕೇವಲ ಒಂದು ಹರಕು ಸೀರೆಯಿಂದ ಮುಚ್ಚಿಕೊಂಡಿದ್ದಳು. ತನ್ನ ಬಲಿತ ದೇಹವನ್ನು ಮರೆಯಿಸಲು ಅವಳು ನಡೆಯಿಸಿದ ಪ್ರಯತ್ನ ಕಣ್ಣುಗಳಿಗೆ ಹೊಡೆಯುವಂತೆ ಇದ್ದಿತು. ಮುಖವೂ ಸುಂದರವಾಗಿಯೇ ಕಾಣಿಸಿತು ಶಿವನಿಗೆ. ಅಪೂರ್ವ ಶೋಭೆಯಿಂದ ಕೂಡಿದ ಚಿಕ್ಕ ಕಣ್ಣುಗಳೆರಡು ಮನ ಸೆಳೆಯುವಂತಿದ್ದುವು. ಎಣ್ಣೆಯ ಸ್ಪರ್ಶವಿಲ್ಲದೆ, ಕೆಸರು ಹಿಡಿದು ಕೊಳೆಯಾಗಿ ಅವಳ ತಲೆಯಗೂದಲುಗಳು ಕೆದರಿ ಹಣೆಯ ಮೇಲೆಲ್ಲ ಹರಡಿಕೊಂಡಿದ್ದುವು.

ಶಿವನ್ ಕೇಳಿದನು ಮತ್ತೊಮ್ಮೆ.

“ ನೀನಾರು ? ”

“ ನನ್ನ ಹೆಸರು ಕನಕಾ ” ಅಂದಳವಳು.

“ ನೀನು ಇಲ್ಲಿಗೆ ಹೇಗೆ ಬಂದೆ? ಆ ಪೋಲಿಗಳು..... ” ಶಿವನ ಮಾತುಗಳನ್ನು ತಡೆದು ಆಕೆಯೇ ಹೇಳಿದಳು.

“ ನಾನು, ಆ ದೂರದೊಂದು ಅಂಗಡಿಯ ಜಗುಲಿಯಲ್ಲಿ ಮಲಗಿದ್ದೆನು. ಆ ಪೋಲಿಗಳು ಬಂದು ನನ್ನ ಬಾಯಿ ಬಿಗಿದು ಇಲ್ಲಿಗೆ ಎಳೆದು ಕೊಂಡು ಬಂದರು..... ನೀವು ಬಂದು ನನ್ನನ್ನು ಉಳಿಸಿದಿರಿ..... ”

“ ನಿನಗೆ ಮನೆ, ತಂದೆ ತಾಯಿ ಯಾರೂ ಇಲ್ಲವೇ ? ’

“ ಎಲ್ಲರೂ ತೀರಿ ಹೋಗಿದ್ದಾರೆ, ನಾ ಸಣ್ಣವಳಿರುವಾಗಲೇ. ಮತ್ತೆ ಬೇಡಿ ಕಾಡಿ ಹೇಗೋ ಜೀವಿಸುತಿದ್ದೆ..... ರಾತ್ರಿ ಎಲ್ಲಿಯಾದರೂ ಒಳ್ಳೆಯ ಜಾಗ ಹುಡುಕಿ ನಿದ್ದೆ ಮಾಡುತಿದ್ದೆ........”

ಎಂಜಲು ನುಂಗಿಕೊಂಡು ಕನಕಾ ಮುಂದುವರಿಸಿದಳು.

“ ....ಇಬ್ಬರು ಪೋಲಿಗಳವರು... ಕೆಟ್ಟ ರಿಕ್ಷಾವಾಲರು. ಒಂದು ತಿಂಗಳಿನಿಂದ ನನ್ನ ಹಿಂದೆ ಬೆನ್ನು ಬಿಡದೆ ತಿರುಗಾಡುತಿದ್ದಾರೆ ಏಕೋ ನನಗೆ ಗೊತ್ತಿಲ್ಲ. ಅವರನ್ನು ಕಂಡರೆ ನನಗೆಷ್ಟು ಭಯವಾಗುತ್ತದೆ.... ”

ಪೋಲಿ ರಿಕ್ಷಾವಾಲರಿಬ್ಬರನ್ನು ನೆನೆದಾಗಲೇ ಹುಡುಗಿಗೆ ಭಯವಾಗಿರಬೇಕು. ಅವಳು ಶಿವನನ್ನು ಬಿಗಿಯಾಗಿ ಹಿಡಿದಳು. ನಡುಕದಿಂದ ಅವಳು ಉಸುರಿದಳು.

“ ...ನೀವು ಬಾರದಿರುತಿದ್ದರೆ ಅವರು ಬಹುಶಃ ನನ್ನನ್ನು ಕೊಲ್ಲುತಿದ್ದರು ! ........ ”

ಶಿವನ್ ತುಂಬಿದೆದೆಯಿಂದ ಕನಕನ ಮುಖವನ್ನು ನೋಡಿದನು. ಉಷಃಕಾಲದ ಪ್ರಕಾಶ ಆಗ ತಾನೇ ಹರಡತೊಡಗಿತ್ತು. ದೀಪಸ್ತಂಬಗಳು ನಂದಿದ್ದುವು. ಬೆಳಗಿನ ಚಳಿಗಾಳಿ ಮೆಲುವಾಗಿ ಬೀಸಿ, ಅವಳ ಹಣೆಯ ಮೇಲೆ ಚೆಲ್ಲಿಕೊಂಡ ಕುರುಳುಗಳೊಡನೆ ಆಟವಾಡುತಿತ್ತು. ಶಿವನ್ ಒಂದು ಕ್ಷಣ ಅವಳನ್ನು ನೋಡಿ, ಮತ್ತೆ ಮುಖ ತಿರುಗಿಸಿ ಅಂದನು:

" ಇಗೋ ನನ್ನ ಕೋಣೆ ಸಮೀಪಕ್ಕೆ ಬಂತು.... ಒಮ್ಮೆ ಕೋಣೆಯೊಳಗೆ ಬರುವೆಯಾ ?.... "

" ನಿಮ್ಮ ತಲೆಗೆ ಪೆಟ್ಟಾಗಿದೆ. ಆಸ್ಪತ್ರೆಗೆ ಹೋಗುವುದು ಒಳ್ಳೆಯದು " ಎಂದಳವಳು, ಕಾತರದಿಂದ.

" ಆಗಲಿ. ಆಸ್ಪತ್ರೆಗೆ ಮತ್ತೆ ಹೋಗುತ್ತೇನೆ. ಒಮ್ಮೆ ಒಳಗೆ ಬಾ.. " ಅವನಂದನು

ತೀರ ಬಡವೆ. ಅವಳಿಗೇನಾದರೂ ಹಣ ಕೊಟ್ಟೇ ಕಳುಹಿಸಬೇಕೆಂದು ಶಿವನ ಆಶಯವಾಗಿತ್ತು ಶಿವನ್ ಕೋಣೆಯ ಬಾಗಿಲು ತೆರೆದು ಒಳಗೆ ನಡೆದನು. ಕನಕಾ ಅವನ ಹಿಂದಿನಿಂದ ಬಂದಳು ಕೋಣೆಯೊಳಗೆ ಇನ್ನೂ ಕತ್ತಲೆಯಿತ್ತು. ವಿದ್ಯುತ್ ದೀಪದ ಗುಂಡಿಯೊತ್ತಿ ಬೆಳಕು ಚೆಲ್ಲಿಸಿದನು

ಶಿವನ ಹಣವೆಲ್ಲ ಅಂಗಡಿಯೊಳಗೆ ಇತ್ತು. ಆದರೆ ತನ್ನ ಪೆಟ್ಟಿಗೆಯೊಳಗೆ ಅವನು ದಿನಾಲೂ ಕೆಲವು ನಾಣ್ಯಗಳನ್ನು ಕೂಡಿಡುತ್ತಿದ್ದನು; ಕಷ್ಟ ಕಾಲದಲ್ಲಿ ಸಹಾಯಕ್ಕಾದೀತೆಂದು ಈಗ ಪೆಟ್ಟಿಗೆಯೆಡೆಗೆ ಸರಿದು ಪೆಟ್ಟಿಗೆಯ ಬಾಗಿಲು ತೆರೆಯುತ್ತ ಶಿವನ್ ಕೇಳಿದನು.

" ನೀನೀಗ ಹೋದರೂ, ಆ ಪೋಲಿಗಳು ನಿನಗೆ ಮತ್ತೆ ತೊಂದರೆ ಕೊಡದಿರುವರೇ ? "

" ....ಕೊಡುವರು ! " ಭಯದಿಂದ ಖಿನ್ನಳಾಗಿ ನುಡಿದಳವಳು.

" ಅಂದರೆ ಏನು ಮಾಡುವಿ ? "

" ಏನು ಮಾಡೋದು ? ನನ್ನ ಭಾಗ್ಯವೇ ಅದು ! " ಅವಳ ಕಂಠ ಗದ್ಗದಿತವಾಯಿತು.

ಪೆಟ್ಟಿಗೆಯ ಮೇಲಿದ್ದ ಬಟ್ಟೆಗಳನ್ನೆಲ್ಲ ತೆಗೆದು ಹೊರಗಿಡುತ್ತ ಶಿವನ್ ಹೇಳಿದ

" ನಿನ್ನ ಭಾಗ್ಯವೇ........ "

ಅವನ ಮಾತು ಮಿಂಚಿನಂತೆ ನಿಂತುಕೊಂಡಿತು. ಕಣ್ಣುಗಳು ಪೆಟ್ಟಿಗೆಯೊಳಕ್ಕೆ ನೆಟ್ಟುಕೊಂಡುವು ಕೈಗಳು ಥರಥರನೆ ಕಂಪಿಸಿದುವು ದೃಷ್ಟಿಯು ಮಸುಕು ಮಸುಕಾಯಿತು.

ನಡುಗುವ ಕೈಗಳಿಂದ ಅವನು ಪೆಟ್ಟಿಗೆಯೊಳಗಿಂದ ಪುಸ್ತಕವೊಂದನ್ನು ಎತ್ತಿದನು. ಅದರ ರಕ್ಷಾಪತ್ರದ ಮೇಲೆ ಬರೆದಿತ್ತು.

## " ದೇವರ ಸಾಮ್ರಾಜ್ಯ "

ಕಂಪಿಸುವ ಬೆರಳಿನಿಂದ ಶಿವನು ರಕ್ಷಾಪತ್ರವನ್ನು ಮಗುಚಿದನು. ಆ ಮೊದಲಿನ ಹಾಳೆಯ ಮೇಲೆ ಕೈ ಬರೆಹದಿಂದ ಬರೆದಿತ್ತು.

ಪ್ರೀತಿಯ ಶಿಷ್ಯ ಶಿವನಿಗೆ-- ಫಾ ಎಂಟನಿ.

ಶಿವನ ಕಣ್ಣುಗಳು ಜಲಮಯವಾದುವು. ಅವನ ಮಂಜಾದ ದೃಷ್ಟಿಯಲ್ಲಿ ಫಾ ಎಂಟನಿಯವರ ಭವ್ಯ ರೂಪ ಗೋಚರಿಸಿತು. ' ಇಗೋ ಪುಸ್ತಕ ತಾ ' ಎಂದು ಕೇಳಿ ' ಪ್ರೀತಿಯ ಶಿಷ್ಯ ಶಿವನಿಗೆ ' ಎಂದು ಬರೆದ ದೃಶ್ಯ ಮೂಡಿ ಬಂತು ಆ ದಿನ ಅವರು ಉದ್ವೇಗದಿಂದ ಅಂತಃಕರಣ ಪೂರ್ವಕವಾಗಿ ಆಡಿದ ಮಾತುಗಳು ಪುನಃ ಕೇಳಿಸಿದುವು.

" ....ಆದ್ದರಿಂದ ಹೇಳುತ್ತೇನೆ ನೀನು ನಿನ್ನ ಜನರನ್ನು ಮರೆಯಬೇಡ. ಶಿವನ್ ! ನೀನು ಯಾವ ಜನಸಮುದಾಯದಲ್ಲಿ ಹುಟ್ಟಿದೆಯೋ, ಎಂತಹ ಕೀಳು ಜೀವನದಲ್ಲಿ ನಿನ್ನ ಬಾಲ್ಯ ಕಳೆಯಿತೋ ಅದನ್ನು ಮರೆಯಬೇಡ. ಆ ಜನರನ್ನು ಉದ್ಧಾರ ಮಾಡುವುದು ನಿನ್ನ ಕರ್ತವ್ಯವಾಗಿದೆ. ವಿದ್ಯಾವಂತನಾದ ನಿನಗೆ, ನಿನ್ನ ಸಮಾಜದ ಋಣವಿದೆ. ಆ ಋಣವನ್ನು ನೀನು ಸಲಿಸಲಿಕ್ಕೇಬೇಕು ....... ಆ ಜನರ ಉದ್ಧಾರವನ್ನೇ ಯಾವಾಗಲೂ ಮನಸ್ಸಿನಲ್ಲಿಟ್ಟುಕೊಂಡು ನೀನು ಕೆಲಸ ಮಾಡಲಿಕ್ಕೆ ಬೇಕು........ "

ಶಿವನ ಮೈ ನಡುಗಿತು. ಕಣ್ಣುಗಳಲ್ಲಿ ನೀರೂರಿತು.

ಕಳವಳದಿಂದ ಚಿಂತಿಸಿದನು.

' ನಾನು ಹಾಗೆಯೇ ಮಾಡುವೆನು ತಂದೆ ! ' — ಎಂದು ತಾನು ಮಾತು ಕೊಟ್ಟಿದ್ದೆ. ಆದರೆ ತಾನೇನು ಮಾಡಿದ್ದೇನೆ ? ಏನೂ ಇಲ್ಲ. ಏನೇನೂ ಇಲ್ಲ. ಕೊಂಪೆಯ ಜನರ ಕೀಳು ಜೀವನವನ್ನು ತಾನು

ದಿನಾಲೂ ನೋಡುತ್ತಿಲ್ಲವೇ? ನಿನ್ನೆಯ ದಿನ ಮುಚ್ಚಂಜೆ ಆ ಬೀದಿಯಲ್ಲಿ ತನ್ನ ದಾದ ಒಂದು ಲೋಕವನ್ನೇ ಕಂಡಿಲ್ಲವೇ? ತಂದೆ ಎಂಟನಿ ಅವರಿಗಾಗಿ ದುಡಿದು ಸವೆದುಹೋದರು. ತನಗೆ, ಅವರು ತಮ್ಮ ಸಂದೇಶವನ್ನು ಸಾರಿದರು. ಆದರೆ ತಾನೇನು ಮಾಡಿದೆ? ತನ್ನ ಜನರ ಉದ್ಧಾರವನ್ನು ಧ್ಯೇಯವಾಗಿಟ್ಟುಕೊಂಡು ತಾನೇನು ಕೆಲಸ ಮಾಡಿದೆ?.... ಏನೂ ಇಲ್ಲ. ಏನೇನೂ ಇಲ್ಲ. ಸಿರಿವಂತರ ಮಗಳಲ್ಲಿ ಪ್ರೀತಿಯಿಟ್ಟು ಹುಚ್ಚನಂತೆ ಅಲೆದಾಡಿದೆ. ಶೀಲೆಯ ಮದುವೆ ಬೇರೆಯವರೊಟ್ಟಿಗೆ ಆಗುತ್ತದೆಂದ ಮಾತ್ರಕ್ಕೆ ಆತ್ಮಹತ್ಯದ ಚಿಂತನೆಯನ್ನು ಕೂಡ ಮಾಡಿದೆ.... ಎಂತಹ ಹುಚ್ಚು!

ಶಿವನ ಕಂಗಳಲ್ಲಿ ನೀರು ತುಂಬಿತ್ತು. ಆದನ್ನೊರಸದೇ ತಲೆ ತಿರುಗಿಸಿ ಹಿಂದೆ ನೋಡಿದನು ಅಲ್ಲಿ ಕನಕಾ ನಿಂತುಕೊಂಡಿದ್ದಳು.

ಹುಡುಗಿಯನ್ನು ಅವನತಿಯ ಪ್ರಪಾತದಿಂದ ಹಿಡಿದು ತಂದಿದ್ದೇನೆ. ಈಗ ಬಿಟ್ಟರೆ ಪುನಃ ಅವಳು ಆ ಪ್ರಪಾತದಲ್ಲಿ ಹಾರಿಕೊಳ್ಳಲೇಬೇಕಾಗುವದು. ಇವಳು ತನ್ನ ಜನರ, ತನ್ನ ಸಮಾಜದ, ತನ್ನ ಬಾಲ್ಯ ಜೀವನ........ ಒಬ್ಬಳು ಹುಡುಗಿ !

ಶಿವನು ತಲೆಯೆತ್ತಿ ಹುಡುಗಿಯ ಮುಖವನ್ನು ನೋಡಿದನು. ಅವನ ಕಣ್ಣುಗಳ ಕರೆಯಲ್ಲಿ ಕಣ್ಣೀರ ಬಿಂದುಗಳು ಕೂಡಿ ಗದಗದನೆ ನಡುಗುತ್ತಿದ್ದುವು. ತುಟಿಗಳ ಮೇಲೆ ನಿರ್ಧಾರದ, ತೃಪ್ತಿಯ ಛಾಯೆ ಅರಳಿಕೊಳ್ಳುತ್ತಿತ್ತು.

ಶಿವನ ಮೌನವನ್ನು ಕಂಡು, ಅವನ ಆ ನೋಟವನ್ನು ಕಂಡು, ಅವನ ಕಣ್ಣೀರನ್ನು ಕಂಡು ಗಾಬರಿಯಿಂದ 'ಏನು?' ಎಂದು ಕೇಳುವಂತೆ ಕನಕಾ ಒಂದು ಹೆಜ್ಜೆ ಮುಂದಡಿಯಿಟ್ಟಳು.

ಶಿವನ್ ಕೇಳಿದ "ಕನಕಾ!...... ನೀನು ನನ್ನನ್ನು ಮದುವೆಯಾಗುವಿಯಾ?" ಕನಕಾ ಉತ್ತರಿಸಲಿಲ್ಲ. ಆದರೆ ಅವಳ ತುಟಿಗಳ ಮೇಲೆ, ಮೆಲ್ಲನೆ, ಬಹು ಮೆಲ್ಲನೆ ಸ್ವರ್ಗೀಯ ನಸುನಗುವೊಂದು ಅರಳಿಕೊಂಡಿತು.

'ಧ್ವನಿ ವರ್ಧಕ'ಗಳು ಶೀಲೆಯ ಮದುವೆಯ ಸುದ್ದಿಯನ್ನು ದಶದಿಕ್ಕುಗಳಿಗೂ ತಿಳುಹಿಸುತಿದ್ದುವು.

# ಪ್ರಕಟವಾದ ಪ್ರತಿಭಾ ಕಿರಣಗಳು.

## ಕಾದಂಬರಿಗಳು

| | ರೂ. | ಆ. |
|---|---|---|
| ದೇವರೆಲ್ಲಿ | ೪ | ೦ |
| ಅಶೋಕ ಚಕ್ರ | ೩ | ೮ |
| ಮುಗಿಲ ಮಲ್ಲಿಗೆ | ೩ | ೦ |
| ಪೂಜಾ ಫಲ | ೧ | ೮ |
| ಪತಿ | ೧ | ೮ |
| ಮರೆಯಲಾರದ ಮಡದಿ | ೧ | ೮ |
| ಸ್ವರ್ಣಭೂಮಿ | ೧ | ೮ |
| ಇಂದ್ರಜಾಲ | ೪ | ೦ |
| ದಲಿತ ಕುಸುಮ | ೨ | ೦ |
| ಸಮ್ರಾಟ ಹರ್ಷವರ್ಧನ | ೨ | ೦ |
| ನೂರಜಹಾನ | ೧ | ೦ |
| ಬೆಳವಲದ ಭಾಗ್ಯಲಕ್ಷ್ಮಿ | ೨ | ೮ |
| ಧರ್ಮಸಂಕಟ | ೨ | ೦ |
| ರಮಾನಾಥ | ೩ | ೦ |
| ಬಿರುಗಾಳಿ | ೩ | ೮ |
| ಗಂಡುಹೆಣ್ಣಿನ ಸಮಸ್ಯೆ | ೩ | ೦ |
| ಅನ್ನಪೂರ್ಣಾ ಮಂದಿರ | ೨ | ೦ |
| ಸಾವಿನ ಉಡಿಯಲ್ಲಿ | ೩ | ೦ |
| ಕಾಲಯಾನ | ೧ | ೧೦ |
| ಮಾಧವ ಲೀಲೆ | ೧ | ೮ |
| ಎರಡು ಸೆಳೆತ | ೧ | ೧೨ |
| ಕೊಲ್ಲಂಬ | ೦ | ೧೪ |
| ಷೋಡಶಿ | ೨ | ೦ |
| ವಿಜಯಾ | ೧ | ೮ |
| ವೈಕುಂಠನ ಮೃತ್ಯುಪತ್ರ | ೧ | ೮ |
| ಯಮದೂತ | ೧ | ೮ |
| ಭೂಮಾತೆ ಮಂದಿರ | ೧ | ೮ |
| ರಾಜಲಕ್ಷ್ಮಿ | ೧ | ೮ |
| ಪುನರ್ಮಿಲನ | ೨ | ೮ |
| ವೃಂದ | ೧ | ೮ |
| ಪತಿವ್ರತೆಯ ಪ್ರಭಾವ | ೧ | ೪ |
| ಕೊಂದವರು ಯಾರು | ೧ | ೪ |
| ಕಾಗೆ ಬೆಕ್ಕು | ೧ | ೪ |
| ದೇವರ ಸಾಮ್ರಾಜ್ಯ | ೨ | ೦ |

## ಕಥಾ ಸಂಕಲನಗಳು

| | ರೂ. | ಆ. |
|---|---|---|
| ಚಂದ್ರತಾರೆ | ೧ | ೪ |
| ಪ್ರಣಯ ಸಮಾಧಿ | ೧ | ೪ |
| ಘಾಟೀ ಮುದುಕ | ೧ | ೮ |
| ಗೃಹದಾಹ | ೧ | ೮ |
| ಚಕಮಕಿ | ೨ | ೦ |
| ಪಂಜರದ ಹಕ್ಕಿ | ೦ | ೧೪ |
| ಬಾಳ್ನೋಟಗಳು | ೦ | ೬ |

## ನಾಟಕಗಳು.

| | ರೂ. | ಆ. |
|---|---|---|
| ಬಾಯಬಂಡಾಯ | ೧ | ೮ |
| ರೇಡಿಯೋ ನಾಟಕಗಳು | ೧ | ೮ |

## ಚರಿತ್ರೆ.

| | ರೂ. | ಆ. |
|---|---|---|
| ನೇತಾಜಿ | ೧ | ೮ |
| ಸುಭಾಸ ಸೀಮೋಲ್ಲಂಘನ | ೧ | ೮ |